---

# ಉಯ್ಯಾಲೆ

ಅಂಬಿಕಾತನಯ ದತ್ತ

ಕರ್ನಾಟಕ ಬುಕ್ ಡಿಪೋ, ಗೌಳಿಗುಡ್ಡ
ಹೈದರಾಬಾದ (ದ)

೧೯೩೮ ] [ ೧-೦-೦

# ಪ್ರಕಾಶಕರ ನುಡಿ

ತಾನು ಜನ್ಮ ಪಡೆದ ಜನಾಂಗದ ಸಂಸ್ಕೃತಿ, ಸಾಹಿತ್ಯಕಲೆ ಮೊದಲಾದವುಗಳ ಅಭಿವೃದ್ಧಿಗೆ ತನ್ನಿಂದ ಸಾಧ್ಯವಾದಷ್ಟು ಸೇವೆಯನ್ನು ಸಲ್ಲಿಸುವದು ಪ್ರತಿಯೊಬ್ಬ ಮಾನವನ ಆದ್ಯಕರ್ತವ್ಯವಾಗಿರುತ್ತದೆ. ಈ ಧ್ಯೇಯವನ್ನು ಈಡೇರಿಸಿಕೊಳ್ಳಲು ಹಲವು ತೆರದಿಂದ ಹೋರಾಡುವದು ಮನುಷ್ಯಪ್ರಯತ್ನಕ್ಕೆ ಸಾಧ್ಯವೂ ಇದೆ. ನಾವು ಈ ಊರಿನಲ್ಲಿ ನೆಲೆಸಿ ೨೫ ವರುಷಗಳಾಗುತ್ತ ಬಂದಿವೆ. ಈ ಅವಧಿಯಲ್ಲಿ 'ನೃಪತುಂಗ ವಿದ್ಯಾಲಯ'ದ ಏಳ್ಗೆಗೂ, ನಿಜಾಮ ಕನ್ನಡಿಗರ ಜಾಗೃತಿಗೂ ನಮ್ಮ ಅಲ್ಪ ಸೇವೆಯನ್ನು ಸಲ್ಲಿಸಿದ್ದೇವೆ. ಗ್ರಂಥ ಭಾಂಡಾರವಿಲ್ಲದೆ ಯಾವ ಜನಾಂಗದ ಸಂಸ್ಕೃತಿಯೂ ಬೆಳಕಿಗೆ ಬರಲಾರದೆಂಬ ಮಾತನ್ನರಿತು ಇಲ್ಲಿ 'ಕರ್ನಾಟಕ ಬುಕ್ ಡಿಪೋ'ವನ್ನು ಸ್ಥಾಪಿಸಿದ್ದೇವೆ.

ಆದರೂ ನಮ್ಮ ಮನಸಿನಲ್ಲಿ ಅಖಿಲ ಕರ್ನಾಟಕಕ್ಕೆ ಪರಿಪೋಷಕವಾಗುವಂತಹ ಕಾರ್ಯವು ನಮ್ಮಿಂದ ಜರುಗಲಿಲ್ಲೆಂಬ ಚಿಂತೆಯು ನಮ್ಮನ್ನು ಬಾಧಿಸುತ್ತಿತ್ತು. ಇಲ್ಲಿ ಜರಗುತ್ತಿರುವ 'ವಿನಾಯಕ'ನ ಉತ್ಸವಮಂಡಲದವರ ಆಮಂತ್ರಣವನ್ನು ಸ್ವೀಕರಿಸಿ ಶ್ರೀಮಾನ್ ಬೇಂದ್ರೆಯವರು ಆಗಮಿಸಿದ್ದರು. ಅಚ್ಚಾಗದೆ ಇದ್ದ ಅವರ ಕವನಗಳ ಕಟ್ಟನ್ನು ನೋಡಿ ಅವುಗಳನ್ನು ಮುದ್ರಿಸಿ ಬೆಳಕಿಗೆ ತರಬಾರದೇಕೆಂದು ಸಹಜವಾಗಿ ಬೆಳೆದು ಬಂದ ಸಲಿಗೆಯಿಂದ ಶ್ರೀ. ಬೇಂದ್ರೆಯವರನ್ನು ಕೇಳಿದೆವು. ಆಗ ಅವರು ಪ್ರಕಾಶಕರು ತಮ್ಮ ಕರ್ತವ್ಯವನ್ನು ತಿಳಿದುಕೊಂಡು ಅಚ್ಚು ಹಾಕಿಸಲು ಸಿದ್ಧರಿದ್ದರೆ 'ನಾನು ಸಂತೋಷದಿಂದ ಕೊಡಲು ಸಿದ್ಧನಿದ್ದೇನೆ' ಎಂದು ಪ್ರೇಮದಿಂದ ಹೇಳಿದರು.

ಹೀಗೆ ನಡೆದ ಸಂಭಾಷಣದ ಕಾರ್ಯರೂಪವೇ ಈ '**ಉಯ್ಯಾಲೆ**'ಯು. ಈ ರೀತಿಯಾಗಿ ನನ್ನದೊಂದು ಉತ್ಕಟೇಚ್ಛೆಯನ್ನು ಪೂರೈಸಿಕೊಳ್ಳುವ ಸಂದರ್ಭವನ್ನು ಇಷ್ಟು ಬೇಗನೆ ಒದಗಿಸಿಕೊಟ್ಟುದಕ್ಕಾಗಿ ಶ್ರೀಮಾನ್ ಬೇಂದ್ರೆಯವರಿಗೆ ಅನಂತಪ್ರಣಾಮಗಳು.

ಈ ಕೆಲಸವನ್ನು ಇಷ್ಟಕ್ಕೆ ನಿಲ್ಲಿಸದೆ ಪ್ರತಿವರ್ಷವೂ ಎರಡು ಪುಸ್ತಕಗಳನ್ನು ಸಲ್ಲಿಸಬೇಕೆಂಬ ನಮ್ಮ ಆಶೆಯನ್ನು ಪೂರ್ಣಮಾಡುವದು ಶ್ರೀಮಾನ್ ಬೇಂದ್ರೆಯವರನ್ನು ಕೂಡಿದೆ.

ಈ ಗ್ರಂಥದ ಮುದ್ರಣಕಾರ್ಯವನ್ನು ಹೊತ್ತಿಗೆ ಸರಿಯಾಗಿ ಅಚ್ಚುಕಟ್ಟಾಗಿಯೂ, ಸುಂದರವಾಗಿಯೂ ಮಾಡಿಕೊಟ್ಟದಕ್ಕಾಗಿ ನಾವು ಸಾಧನ ಪ್ರೆಸ್ಸಿನ ಒಡೆಯರಿಗೆ ಋಣಿಯಾಗಿದ್ದೇವೆ. ಈ ಕಾರ್ಯದಲ್ಲಿ ನಮಗೆ ನೆರವಾದ ನಮ್ಮ ಉಳಿದ ಸ್ನೇಹಿತರಿಗೆ ತುಂಬಾ ಆಭಾರಿಯಾಗಿದ್ದೇವೆ.

ಕರ್ನಾಟಕ ಬುಕ್‌ಡಿಪೋ
ಗೌಳಿಗುಡ್ಡ
**ಹೈದ್ರಾಬಾದ** ದ.
೨-೫-೩೮

**ಭೀಮಾಚಾರ್ಯ ಗೋವಿಂದಾಚಾರ್ಯ**
**ಚಿಮ್ಮಲಗಿ**
ಪ್ರಕಾಶಕರು

# ಮುನ್ನುಡಿ

'ಉಯ್ಯಾಲೆ'ಯೆಂಬೀ ಕವನಸಂಗ್ರಹದಲ್ಲಿ ನಾಲ್ಕು ಭಾಗಗಳಿವೆ. ಒಂದೊಂದು ಭಾಗದ ಬಗ್ಗೆ ಒಂದೆರಡು ಮಾತುಗಳನ್ನು ಹೇಳುವದು ಪ್ರಸ್ತುತವಾಗಿದೆ.

ಅಷ್ಟಷಟ್ಪದಿ:—ಈ ಕವನರೂಪವು ಇಂಗ್ಲಿಶ ಸೊನೆಟ್ಟಿ (Sonnet)ನ ಕನ್ನಡ ಅವತಾರವು. 'ಕವಿಶಿಷ್ಯ,' ಶ್ರೀ. ಗೋವಿಂದ ಪೈ, ಶ್ರೀ. ಪು. ತಿ. ನರಸಿಂಹಾಚಾರ್ಯ, 'ಶ್ರೀನಿವಾಸ' ಮೊದಲಾದವರು ಸೊನೆಟ್ಟಿಗೆ ಕನ್ನಡ ರೂಪಕೊಡಲು ಹವಣಿಸಿದರು. ಕೆಲವರು ೧೨ ಸಾಲಿನ ಸೀಸಪದ್ಯ, ಕೆಲವರು ನಾಲ್ಕು ಸಾಲಿನ ನಾಲ್ಕು ಶ್ಲೋಕಗಳು, ಕೆಲವರು ಒಂದು ಪಲ್ಲವಿ ಮತ್ತು ನಾಲ್ಕು ಸಾಲಿನ ಮೂರು ನುಡಿಗಳು ಈ ರೀತಿಯಲ್ಲಿ ಸೊನೆಟ್ಟಿಗೆ ದೇಹಕೊಡಲು ಪ್ರಯತ್ನಿಸಿದರು. ನಾನು ನಾಲ್ಕು ಷಟ್ಪದಿಗಳಿಂದ ಸಾನೆಟ್ಟ ಸದೃಶವಾದ ನಾಲ್ವರಿಗಳನ್ನು ಬರೆದೆ. ಅವುಗಳ ಉದಾಹರಣೆಗಳು 'ಗರಿ'ಯಲ್ಲಿವೆ. ಆದರೆ ಹದಿನಾಲ್ಕು ಸಾಲುಗಳು ಅದರಲ್ಲಿಯೂ ಎಂಟು ಸಾಲಿನ ಒಂದು ಖಂಡ, ಆರು ಸಾಲಿನದಿನ್ನೊಂದು, ಈ ಎರಡು ಖಂಡಗಳಲ್ಲಿ ಒಂದು ಭಾವದ—ವಿಚಾರದ ತಿರುವು,—ಸಾನೆಟ್ ಸಂಪ್ರದಾಯದ ಪ್ರಾಸರಚನೆ, ಈ ಲಕ್ಷಣಗಳುಳ್ಳ ಈ ಕವನರೂಪವು ಕನ್ನಡದಲ್ಲಿ ನೆಲೆಗೊಳ್ಳುವಂತೆ ತೋರುತ್ತದೆ. 'ಶ್ರೀನಿವಾಸ'ರ **ಮಲಾರ**ದೊಳಗಿನ ಲಕ್ಷಣ ವಿಶುದ್ಧವಾದ ವಿಪುಲ ಅಷ್ಟಷಟ್ಪದಿಗಳು ಈ ಸಾಹಿತ್ಯ ರೂಪಕ್ಕೆ ಒಳ್ಳೆ ತಳಹದಿಯನ್ನು ಹಾಕಿವೆ. ನನ್ನೀ ಅಷ್ಟಷಟ್ಪದಿಗಳಲ್ಲಿ ಪ್ರಾಸರಾಹಿತ್ಯ, ಪಾದಾಂತಯತಿಯ ನಿಯತರಾಹಿತ್ಯ ತಿರುವಿನ ವೈಚಿತ್ರ್ಯ, ಇವು ಹೊಸ ಲಕ್ಷಣಗಳಾಗಿವೆ. ಇದಲ್ಲದೆ ಮತ್ತೆ ಬೇರೆ ಪ್ರಯೋಗಗಳನ್ನೂ ಇವುಗಳಲ್ಲಿ ಮಾಡಿದ್ದಾಗಿದೆ. 'ಶಶಿಪದ' 'ವಿನಾಯಕ'ರೂ ಸೊನೆಟ್ಟುಗಳನ್ನು ಬರೆದಿದ್ದಾರೆ.

ಸೀಸಪದ್ಯ:—ನಾನು ಬರೆದ ಸೀಸಪದ್ಯಗಳು ಲಕ್ಷಣಬದ್ಧವಾದ ಸಾಂಪ್ರದಾಯದ ಸೀಸಪದ್ಯಗಳಲ್ಲ. ಮೂಲ ಸೀಸಪದ್ಯವು ದ್ರಾವಿಡ

ಮಾರ್ಗದ ಗಣವೃತ್ತವಾಗಿದೆ. ನನ್ನದೊ ಶುದ್ಧಮಾತ್ರಾವೃತ್ತ; ಮಾತ್ರಾ ಗಣಬದ್ಧವಾಗಿದೆ. ಕೊನೆಯ ನಾಲ್ಕು ಕಿರಿಸಾಲುಗಳು ಮಾತ್ರೆ ಗಳಲ್ಲಿ ಹೆಚ್ಚು ಕಡಿಮೆಯಾಗುವವು. ಒಂದು ವಿಧದ ಪ್ರಾಸರಚನೆಯೂ ಇದೆ. ಈ ಕವನರೂಪವನ್ನು ಕೂಡ ನಾನು ಸಾನೆಟ್ ಕಣ್ಣೆದಿರಿಟ್ಟು ರಚಿಸಿದ್ದೇನೆ.

ಅಷ್ಟಷಟ್ಪದಿಯೇ ಆಗಲಿ, ಸನ್ನೀಸಪದ್ಯವೇ ಆಗಲಿ ರನ್ನ ಬಗೆ ಯನ್ನು ಹೊಸನುಡಿಯಲ್ಲಿ ಕುಂದಣಿಸುವ ಪ್ರಯತ್ನವು. ಕಲ್ಲಿನಲ್ಲಿ ಕಲ್ಪ ನೆಯ ಅಂದವನ್ನು ಕಂಡರಿಸುವ ರೂವಾರಿ ಬಗೆಯ ಸಾಹಸವು. ವಿಚಾರ ಸಾಂದ್ರತೆ, ಬಂಧದ ಬಿಗುವು, ಶೈಲಿಯ ಗಾಂಭೀರ್ಯಗಳಿಂದ ಈ ರಚನೆಗೆ ಶಿಲಾಶಿಲ್ಪದ ವೈಚಿತ್ರ್ಯವು ಬಂದಿದೆ. ಆದರೂ ವಿಮರ್ಶಕಾಭ್ಯಾಸಿಗಳಿಗೂ ಕಾವ್ಯರಸಿಕರಿಗೂ ಇದರೊಳಗಿನ ವಚನಗಳು ಆನಂದಗೊಳಿಸದಿರಲಾರವು ಎಂದು ನಾನು ಆಶಿಸಿದ್ದೇನೆ.

ಹಾಡುಗಳು:— ಈ ಭಾಗದೊಳಗಿನ ಎಲ್ಲ ಕವನಗಳೇನು ಹಾಡು ಗಳಲ್ಲ. ಸಾನೆಟ್ ಮಾದರಿಯ ಕೆಲ ಪದ್ಯಗಳು ಇದರಲ್ಲಿವೆ.

ವಚನಗಳು:— ಫ್ರೀ ವ್ಹರ್ಸಿಗೆ ಸರಿಯಾಗುವ ಸ್ವಚ್ಛಂದ ಗೀತ ಪ್ರಕಾರವನ್ನು ಹುಟ್ಟಿಸಿಕೊಳ್ಳಲು ನಾನು ಇ. ಸ. ೧೯೨೦—೨೧ರಲ್ಲಿ ಯೋಚಿಸಿ 'ನೋವಿನ ಬೆಲೆ' 'ಹಿಗ್ಗಿನ ನೆಲೆ' ಮೊದಲಾದ ವಚನಗಳನ್ನು ಬರೆದೆ. ೧೯೨೪ರಲ್ಲಿ ಈ ಕರುಳಿನ ವಚನಗಳನ್ನು ಪೂರ್ಣಗೊಳಿಸಿದರೂ ೧೯೩೧ರಲ್ಲಿ ಅವು 'ಜಯಕರ್ನಾಟಕ'ದಲ್ಲಿ ಪ್ರಕಟವಾದವು. ಪ್ರಾಚೀನರ ವಚನಗಳು ಶುದ್ಧ ಪಾರಮಾರ್ಥಿಕಸಾಧನೆಯ ಮಾರ್ಗದೊಳಗಿನವು. ಕರುಳಿನ ವಚನಗಳೊ ಲೌಕಿಕಭಾವದ ಪ್ರಕಟನೆಗೆ ಬಳಸಿಕೊಂಡಂಥವು ಗಳಾಗಿವೆ. ಬೇರೆ ಕವಿಗಳೂ ವಚನಶೈಲಿಯನ್ನು ಹೊಸ ಕಾಲಕ್ಕೆ ತಕ್ಕ ಹಾಗೆ ಹೊಸ ರೀತಿಯಲ್ಲಿ ಉಪಯೋಗಿಸಿದ್ದಾರೆ.

'ಉಯ್ಯಾಲೆ'ಯ ಮುದ್ರಣದ ಪ್ರತಿಯನ್ನು ಸಿದ್ಧಪಡಿಸುವ ಕಾರ್ಯದಲ್ಲಿ ನನ್ನ ಅನೇಕ ತರುಣಮಿತ್ರರು ಸಹಾಯ ಮಾಡಿದ್ದಾರೆ.

'ಮೈತಳೆದ ಕರುಣೆ' ಎಂಬ ನನ್ನ ಪದ್ಯವನ್ನು ಗೆಳೆಯರಾದ ಆನಂದರ ಅಪ್ಪಣೆಯಿಲ್ಲದೆ ಪ್ರಸಿದ್ಧ ಮಾಡಿದ್ದೇನೆ. ಇದರೊಳಗಿನ ಕೆಲವು ಪದ್ಯಗಳು 'ಜಯಕರ್ನಾಟಕ, ಪ್ರಬುದ್ಧಕರ್ನಾಟಕ, ವಿಶ್ವವಾಣಿ, ಕಥಾಕುಂಜ' ಮೊದಲಾದ ಪತ್ರಿಕೆಗಳಲ್ಲಿ ಈ ಮೊದಲೆ ಪ್ರಕಾಶಿತವಾಗಿರುವವು. ಈ ಎಲ್ಲ ಮಿತ್ರರಿಗೂ ನಾನು ವಂದನೆಗಳನ್ನು ಅರ್ಪಿಸುತ್ತೇನೆ.

ಈ ಕವನಸಂಗ್ರಹವನ್ನು ನನ್ನ ಮಿತ್ರರೂ ಕನ್ನಡದ ಭಕ್ತರೂ ಆದ ಶ್ರೀ. ಭೀಮಾಚಾರ್ಯ ಚಿಮ್ಮಲಗಿ, ಹೈದ್ರಾಬಾದ, ಇವರು ಈಗ ಪ್ರಕಾಶಗೊಳಿಸಿರುವರಲ್ಲದೆ ಕೆಲವು ಕರಾರುಗಳಿಗಾಧೀನವಾಗಿ ಈ ಸಂಗ್ರಹದ ಅಧಿಕಾರವನ್ನು ಪಡೆದುಕೊಂಡಿದ್ದಾರೆ. ಕವನಸಂಗ್ರಹಗಳ ಪ್ರಕಾಶನಕ್ಕೆ ಮುಂದೆ ಬರುವದು ಇನ್ನೂ ಸಾಹಸವೇ ಆಗಿದೆ. ಆದರೂ ಅವರು ನನ್ನ ವಿಷಯದ ಸ್ನೇಹದಿಂದಲೂ, ಕನ್ನಡದ ಒಗ್ಗೆ ಇರುವ ಪ್ರೀತಿಯಿಂದಲೂ ಈ ಕಾರ್ಯವನ್ನು ಕೈಕೊಂಡಿದ್ದಾರೆ. ಅವರು ಧೈರ್ಯಗೊಳ್ಳುವಂತೆ ಕನ್ನಡ ವಾಚಕರು ಈ ಸಂಗ್ರಹವನ್ನು ಬರಮಾಡಿಕೊಳ್ಳುವರೆಂದು ನಾನು ನಂಬಿದ್ದೇನೆ. 'ಸಾಧನ' ಮುದ್ರಣಾಲಯದ ಶೇಷಗಿರಿರಾಯರು ವಿಶೇಷ ಶ್ರಮವಹಿಸಿ ಇದನ್ನು ಅಂದವಾಗಿ ಮುದ್ರಿಸಿದ್ದಾರೆ. ಈ ಮಿತ್ರರಿಬ್ಬರಿಗೂ ನಾನು ಕೃತಜ್ಞನಾಗಿದ್ದೇನೆ.

**ದ. ರಾ. ಬೇಂದ್ರೆ**

# ಪರಿವಿಡಿ

# ಅರ್ಪಣ

ಬಾಲ್ಯದಿಂದ ಇದುವರೆಗೂ ಸ್ನೇಹಿತರಾಗಿರುವ,

ಸಹೃದಯರಾಗಿ

ನನ್ನ ಕವನದ ಸಸಿಗೆ ನೀರೆರೆದ,

ಕವಿಗಳಾದ

ಗೆಳೆಯ, **ಶ್ರೀಧರ ಶಿವರಾಮ ಖಾನೋಳಕರ**

ಇವರಿಗೆ

ಅತ್ಯಂತ ಮಮತೆಯಿಂದ—

# ಅಂದು-ಇಂದು

ನಿನ್ನ ಅಡಿಯೊಳಿಡಲು, ಅಂದು,
ಕಂಪಿಸಲರ ತಂದೆನೊಂದು
ಮೀಸಲೆಂದು ಮೂಸಲಿಲ್ಲ; ಆಶೆ ಅಡಗಿತು!

ಆಸೆ ಹುಳವು ಹೂವನಂಟೆ
ಕಂಪನೆಲ್ಲ ತಾನೆ ಈಂಟೆ
ಅಡಿಯೊಳಿಟ್ಟ ಒಡನೆ ಹೂವು ಬಾಡಿಬಿಟ್ಟಿತು!

ಕಂಪಿಸಲರ ತಂದೆನಿಂದು
ನಿನ್ನ ಅಡಿಯೊಳಿಡಲು ಎಂದು
ಮೂಸಿ ನೋಡಬೇಕು ಎಂಬ ಭಾವ ಹುಟ್ಟಿತು!

ಭಾವ ಹುಟ್ಟಿ, ಮೂಸಿ ಬಿಟ್ಟಿ
ಹಿಗ್ಗಿ, ನಿನ್ನ ಅಡಿಯೊಳಿಟ್ಟೆ
ಗಮ ಗಮ ಗಮ ಒಳಗು ಹೊರಗು ಕಂಪು ಇಡುಗಿತು!

# ಪರಿವಿಡಿ

# ಅಷ್ಟಷಟ್ಪದಿ

ಅಷ್ಟಷಟ್ಪದಿಯಲ್ಲಿ ಉಯ್ಯಾಲೆಯಾಡುತಿದೆ
ಕೌತುಕದ ಬಗೆ; ಹಾಗೆ ಇದು, ಹೀಗೆ ಇದು, ಎನುತ
ಬೇಕುಬೇಕಿನ ವಿಲಾಸದಲಿ ತನ್ಮಯವಾಗಿ,
ಸಂಶಯವೆ ಸಿಂಗಾರವಡೆದು ಸ್ವಚ್ಛಂದದಲಿ
ಬೀರಿದುದೆ ನೋಟ, ಹಾರಿದುದೆ ಹುಬ್ಬೆಸುವಂತೆ
ಕುಣಿಸುತಿದೆ ಅಂಗಾಂಗ; ಹೃದ್ಯ ಚಿತ್ರತರಂಗ
ಪುಂಚಿಸಂತುಲ್ಲಟಿಸಿ ಆಟಮಟಿಸಿ ತಾನು ಮಣಿ-
ದುದೆ ಭಂಗಿ ಎಂಬ ಸಡಗರದೊಳಿದೆ ತೊಳತೊಳಗಿ

ಮಣಿಯಲ್ಲಿ ಮಣಿವ ಕೊಲ್ಲಟಗಿತ್ತಿ ತನ್ನ ಜೋ-
ಕೆಯ ತೂಕದಲ್ಲಿ ತೂಗಾಡುವಳು. ಪ್ರಿಯ ಹಸ-
ಣಿಕೆ ಮಿಗಿಲು. ನಿದ್ದೆ ಎಚ್ಚರಗಳಲಿ ಒಂದೆ ಬಾ-
ಳಿನ ಬಿಂಬ ತೇಂಕಾಡುವದು. ಉಸಿರ ಜೀಕೇಳಿ-
ಸಲಿ ಡೊಂಕೆ ಪ್ರಾಣಗತಿ? ಬಗೆಯು ಇಬ್ಬಗೆಯಲ್ಲಿ
ಹುರುಳ ತಿರುಳೊಂದು. ಕಣ್ಣೆರಡು. ಕಾಣಿಕೆ ಎರಡೆ?

# ಪ್ರಳಯ ಸೃಷ್ಟಿ

ಹೊಗೆ ಮೋಡ ಹಿಂಜಿ, ಕಣ್ಮರೆಯಾಗುವಂತೆ, ನೆನೆ-
ಸಿದ ರೂಪ ಹುಡಿಯಾಗುತಿದೆ; ಮಬ್ಬು ಕವಿದು ಬರು-
ತಿದೆ; ಸ್ವಪ್ನಲೋಕದೊಳು ಆಕಾರ ಪ್ರಳಯವಿರು-
ವಂತೆ, ತುಂಬಿದೆ ನಿರಾಕಾರ ತಮ. ಚಿತ್ರಘನ
ನಿಬಿಡ ಮನ; ಹೊತ್ತು ಗೊತ್ತಿಲ್ಲ; ಮಿಸುಗುಡದೆ ಮನ
ತನ್ನ ನುಂಗಿದೆ ತಾನು. ಯಾವ ಲೋಕವೊ ಇದಿರು?
ಸೃಷ್ಟಿಯಿಲ್ಲದ ದೃಷ್ಟಿ. ಚಿತ್ರ! ನಿಶ್ಚಿತ್ರ. ಇರು-
ವೆನೊ ನಾನು? ಇಹುದೇನು? ಬರಿಬಯಲನಿರ್ವಚನ!

ಮರಣ ಮೂರ್ಛಿತ ದೇಹಕುಸಿರು ಹುಟ್ಟಿದ ಹಾಗೆ
ಸ್ಪಂದಿಸುವದಿದೊ ತಮವು; ದಿವ್ಯ ಶಾಲಗ್ರಾಮ
ಶಿಲೆಯೊಳುದಿಸಿದ ಕೋಮಲ ಕೃಷ್ಣಮೂರ್ತಿಯ ಮಧುರ
ಮುರಲಿ ನಾದವು ತಮದ ಕಣ ಕುಣಿಸುತಿದೆ; ಸೋಗೆ
ನವಿಲಂತೆ, ಸುತ್ತು ಕಣ್ಣೋ ಕಣ್ಣು! ಚಿರವಿಧುರ
ಪೂರ್ವವಧು ಪಡೆದಂತೆ, ಮನವೆ ಮಂಗಲಧಾಮ.

# ಭಾಟಘರಸಾಗರ

ಪರಶುರಾಮನ ಮಹೋತ್ತುಂಗ ದೋರ್ದಂಡ ಉ-
ದ್ದಂಡ ಸಹ್ಯಾದಸಹ್ಯ ಸಾಮರ್ಥ್ಯದಲಿ ಸೀಡಿ-
ಕೊಂಡಿದೆ. ಇದೋ ಅಪರಜಲಧಿಯು ಪರಾಜಿತರ
ಸಮುದೊಳಂಭೋದಕುಂಭಗಳಿಂದ ರಾಜ್ಯಾಭಿ-
ಷೇಕ ಮಾಡುವುದು ಮರ್ಷಕ್ಕೆ. ಸ್ವಚ್ಛಂದನಿ
ರ್ಬಂಧ ಸ್ವಾತಂತ್ರ್ಯದೊಳು **ನೀರೆ** ತೀಡುವಳು ಸೀ-
ಮಾರೇಖೆ. ಕಾಡುಬೇಡರ ಸಹಜಯೋಗದಲಿ
ಸಾರ್ವಭೌಮನ ಹಾಗೆ ಸುತ್ತು ಹಬ್ಬಿದೆ ಪ್ರಕೃತಿ.

ಬಾಲಕರ ಮಣ್ಣಾಟದೊಳಗಿನೊಡ್ಡುಗಳನನು-
ಕರಿಸಿ, ಬೆಟ್ಟದ ಪಾದದೆಡೆಗೆ ಕುಳಿತಿದೆ ಧೂರ್ತ
ವಿನಯದಲಿ ಭಾಟಘರ ಸಾಗರದ ಅಣೆಕಟ್ಟು;
ಉಪಯೋಗ ಕೋರಿ, ಸಂಸಾರಿಕನ ರೀತಿಯಲಿ
ಸುಂಕ ಬೇಡುತ್ತಿಹುದು ಕಾಡ ಸರಕಿನ ಮೇಲೆ.
ಎಂತು ಪ್ರಕೃತಿ ಪ್ರಚಂಡ, ಅಂತೆ ಮಾನವನ ಕೃತಿ!

# ಕರುಳು

ತಾಮ್ರಪರ್ಣಿಯ ಒಡಲ ರಾಜಮೌಕ್ತಿಕದ ಭಂ-
ಡಾರ ಮುದ್ರೆಯನೊಡೆಯೆ, ದಿನವು ನೀರನು ಧುಮುಕು-
ವಂಥ ಕುಂಗನು ಪಡೆವುದೇನು ? ಮೈಮುರಿ ದುಡಿಯೆ
ಮರುದಿನವು ಅಣಿಗೊಳುವದಕೆ ಕೂಳತುತ್ತು; ಮನ
ಮರೆಯೆ ಕುಡಿಯುವ ಗುಟುಕು. ಹೆತ್ತ ಹೊಟ್ಟೆಯನು, ಕೈ
ಹಿಡಿದ ಮೈಯನು ತಣಿಸಲೆಂದು ದುಡಿವನೊ! ಮುತ್ತು-
ಗಾರ ಭಾಗ್ಯವನು ಲೆಕ್ಕಿಸನವನು. ತಾಯ ಮಡ-
ದಿಯ ಹರ್ಷ ಬಾಷ್ಪವೇ ಅವನ ಬದುಕಿನ ಹುರುಳು.

ಭವಜಲಧಿಯಲಿ ಮುಳುಗುತೇಳುತಿರುವೀ ಜೀವ-
ರಾಶಿ ಕಾಣುವದೇನು ಕೊನೆಗೆ, ಮಕ್ಕಳ ಮುದ್ದು-
ಕೂಟಕ್ಕೆ ಬಯಸಿ? ಆ ಸಾವ್ಕಾರನ ಹಾಗೆ
ಕಾಳ ಕೊಸರುವ ದುಡಿಮೆ; ಮಡಿವನಕ ಒಡಕುಮನು
ತಪ್ಪಿಲ್ಲ. ಇಲ್ಲಿಯೂ ಇರದೆ "ಅಯ್ಯೋ, ನೊಂದೆ.
ಒಂದೆಯಾ ಬಾ ಕಂದ ದಣಿದೆ" ಎನ್ನುವ ಕರುಳು?

# ಸಮಸ್ಯೆ

ತಾಯಿ ಹೇಳುತಲಿದ್ದಳೆನ್ನ ಬಾಲ್ಯದ ಕತೆಯ:—
ಮುಂಜಾವದಿಂದ ಮುಂಗಾಳು ಕವಿಯುವ ವರೆಗೆ
ಓರಿಗೆಯ ಹಸುಳರೊಡನಾಡಿ, ಬಿಸಿಲಿನ ಬೇಗೆ
ಬೆಳುದಿಂಗಳೆನೆ ಕಳೆಯುತಿದ್ದೆ. ಹಸಿವೆಯ ವ್ಯಥೆಯ
ನಾನು ಅರಿತಿರಲಿಲ್ಲ. ಆಟನೋಟಕೆ ಹೀಗೆ
ಮುಚ್ಚಿಯೂಟವ ಮರೆಯೆ, ಕಿರುಮನೆಯ ಕತ್ತಲೆಯ-
ಲೆಸಗೆ ಉಣಿಸಲು, ಕೇಳುತಿದ್ದೆ ಹಿರಿಯರ ಶ್ರುತಿಯ—
"ಬೆಳಕೆ ಬೆಳಕಿದ್ದು ಕತ್ತಲೆಯು ತುಂಬಿತು ಹೇಗೆ?"

ವೇದಕಾಲದಗಾಧದಿವ್ಯಮಾನಸಹೃದಯ-
ದಾಳದಿಂದಲಿ, ಸುಖದ ಸಾಮ್ರಾಜ್ಯ ನೆಲೆಗೊಳಿಸೆ,
ಸೋಲು ಗೆಲುವಿನ ತಕ್ಕೆಯಲ್ಲಿ ನುಗ್ಗಾದ ಭಯ-
ಭೀತ ಜಿಹ್ವೆಗಳಲ್ಲಿ, ಹೀಸಲೊಲುಮೆಗೆ ಆಸೆ
ಒಟ್ಟು ಕಣ್ಣೀರಿನಲಿ ಮುಳುಗುತಿಹ ಸತಿಪತಿಯ
ಕಂಠದಲಿ, ಮೂಡುತಿದೆ ಅಂದಿನೊಂದೆ ಸಮಸ್ಯೆ.

# ಸಂತತಿ

“ವರನೆ ಬಾ ಇಲ್ಲಿ; ಮುಗಿಲಿಗೆ ನೆಲವನಿತ್ತಂತೆ
ನಿನಗೊಪ್ಪಿಸುವೆನಿವಳ. ಇವಳು ಸುಕ್ಷೇತ್ರ, ಕಾ-
ಮದಲಿ ಅರ್ಥದಲಿ ಸಹಧರ್ಮಿಣಿಯು ಮುಕ್ತರೊಲು.
ಚೆಲುವರನು, ಕಟ್ಟಾಳುಗಳನು, ಗಂಭೀರರನು
ಪಡೆದು ಇವಳಲಿ ಬುನಾದಿಯ ಮನೆಯ ಕಟ್ಟು ಮುಂ-
ದಕೆ. ದೇವ ದೇವತಾ ಗಣಕೆ ಮೇಲ್ಪಂಕ್ತಿಯೆನೆ
ನಿನ್ನ ಮನದಲಿ ಹೊಳೆದು ಬೆಳೆದ, ಕನಸಲಿ ಇವಳು—
ಕೊಂಡು ಕೊನೆಯುವ ಮೂರ್ತಿಗಳನು ಮೂಡಿಸಿರಿನ್ನು”

“ಕೃತಯುಗವು ಕಲಿಯುಗಕೆ ಇಳಿದು ನಿಂತಿತು; ಮಾನ-
ವನ ದುಃಖದರ್ಶನವು ಬೆಳೆದು ಬಂದಿತು; ಸುಖವು
ಕಣಸಿನಲಿ ಕೆಣಕುತಿದೆ. ವಾನರರು ನರರಾದ-
ರೋ, ನರರೆ ವಾನರರು ಆಗುತಿಹರೋ? ಕನಲು
ಕನಲಾಗುತಿದೆ ಆಸೆ; ಕುಣಿಯುತಿದೆ ಪ್ರಾಣ. ಮಂ-
ತ್ರವನೆ ನುಂಗಿತೊ ತಂತ್ರ, ಬಲಿ ಕನ್ನೆ, ಮನವನ್ನೆ?”

# ಸುಖಸ್ಪರ್ಶ

ನೊಸಲು ನೊಸಲಿನಲಿರಿಸಿ ಸುಸಿಲಾಡುವವು ಹೂವು
ಹೊಳೆ ನೀರ ಒಳಗೆ; ಪಡಿನೆಳಲನೆದೆಯೊಳಗಿರಿಸಿ
ಮಧುರ ಸಲಿಲ ಸಲೀಲ ನಲಿದಾಡುವದು; ಚಿತ್ರ
ರತಿಯು ನೋಡುತ ಚಿಕ್ಕೆ ಕಣ್ಮಿಟುವವು; ಮುಂದ
ಮಾರುತನು ಪಿಸುಗುಡುತಲಿಹನದರ ಸೌಸವದ
ಸವಿಮಾತ; ಸಂಜೆ ಬಾಸಣಿಸಲಿದೆ ತಿಮಿರ ಜವ-
ನಿಕೆ. ಏನು ಒಗೆತನದ ಸೊಗವೊ! ಸಾಕಾರ ಸೃ-
ಷ್ಟಿಯು ಹಿಗ್ಗುತಿದೆ ಬಂಡಿನಲ್ಲು, ಬ್ರಹ್ಮಾಂಡದಲು.

ಭೂಜಗಕೆ ಒಸಗೆಯೆನಿಸುವ ಸುಖಸ್ಪರ್ಶ ಬಯ-
ಸುತ ಬಳಲಿ ತೊಳಲುತಿಹರಿವರು ನೀರೆಯರೆ? ಅಹ,
ಇವರು ನರರೇ? ಮೈಯು ಮಾರಲಿಹರೇ? ಒತ್ತೆ-
ಕೊಳ್ಳಲಿಹರೇ? ಎಂಜಲಕ್ಕೆ ಕುಲಗೆಡುವರಲೆ
ದೇವತೆಗಳೌರಸರು! ಏನು ವಿಧಿ ಘಟನೆಯೋ!
ಅರರೆ, ಈ ನರ ಪಿಂಡ ಹುಲ್ಲು ಹೂವಿಗು ಕೀಳೆ?

# ಇಜ್ಜೋಡು

ಒಂದಿದ್ದರೊಂದಿಲ್ಲ; ಇಂದಿಗೂ ಎರಡು ಹೊಂ-
ದಿಲ್ಲ; ನಡೆದಿದೆ ಸೃಷ್ಟಿ; ಫಲವೀವ ಅಮೃತ ವೃ-
ಷ್ಟಿಯು ಬಯಸಿ, ಕೊಸರುತಿದೆ ಕಮರುತಿದೆ. ಎಲೆಯ ಪಸ-
ರದಲಿ ಕಾಣದಿದೆ ಹೂ–ಹಣ್ಣು. ಪ್ರಥಮ ಪ್ರಾಯ-
ದಲ್ಲಿ ನಾಚಿಗೆ ಮುಸುಗಿ ಸುಕುಮಾರ ಕುಸುಮ ಸಮ–
ಸಿಂಗಾರವಡಗೆ, ಪುರುಷನನುರಾಗವು ಬಣ್ಣ-
ಗುಂದಿ, ಹಿಮಧವಲ ಶಾಂತಿಯಲಿ, ಚಂದಿರನ ಪಡಿ-
ನೆಳಲ ಕಾಂತಿಯಲಿಹುದು. ಸ್ವಗತ–ತೃಪ್ತನೊ ನಲ್ಲ.

ಹಣ್ಣೆಲೆಯು ಉದುರಲಿರುವಾಗ, ಶಾರದ ಶುಭ್ರ
ಕೌಮುದಿಯು ಕೆಣಕುತಿದೆ ವಿರಸ ಶಿಶಿರವನು, ಮಾ-
ಗಿಯು ದಾಟಿ ಸುಗ್ಗಿ ಕೆಂದಳಿರ. ಹದ ಪಡೆದ ಹೃದ-
ಯದ ಹವಣುಗೊಂಡ ಸತಿ ನೇತ್ರಪಲ್ಲವಿಸೀಗ
ಕರೆಯುವಳು. ಹತವಿಧಿಯೆ! ಕದ ತೆರೆಯಲಿಲ್ಲ, ಕದ
ತಟೆದಾಗ; ಕದ ತೆರೆಯೆ, ಆ ಪುರುಷ ಬರಲೊಲ್ಲ.

# ಪಾಶ

ಗಾಳಿ ಸುಳಿಯದ ಮನೆಯ ಹೊಗೆ ಹಾದಿಸಿಗದೆ ಒಳ-
ಗೊಳಗೆ ಹಬ್ಬುತ, ಉಸಿರ ಕಟ್ಟುವೊಲು, ಇರುಳು ಮುಗಿ-
ಲಲಿ ಅಭ್ರ ಕವಿಯುವವು ಚಿಕ್ಕೆಬೆಳಕನು; ಬೆಂದು ಬಳ
ಲಿದ ಹೆಣ್ಣುಮನ ಕಂದುತಿದೆ ಕುಂದುತಿದೆ ನೊಂದ-
ನುಡಿಯೊಂದರಲಿ; ಸರಸ ಸಲ್ಲಾಪದುಲ್ಲಾಸ
ಸೂಸದಾಗಿದೆ: "ವಿರಸ ಸಂಸಾರ ನಿಃಸಾರ
ಜೀವನವು ಹೇಸಿ, ಮರಣವು ಲೇಸು"–ಹುಸಿ ಭೂತ
ಪಿನ್ನಳಲಿ ಬೀಸುತಿದೆ ಬಲೆಯ ಯಮಪಾಶದೊಲು.

ಜಾಲಗಾರನು ಉಸುಕು ಜಾಳಿಸುವ ಹಾಗೆ, ಜೊತೆ-
ಗಾರ ತನಿಜಿನುಗು ದನಿಯಲಿ ಸೋಸುತಿಹನು, ಹಿ-
ನ್ನೋಟ ಮುನ್ನೋಟದಲಿ ಗಸಿಗಿಳಿಸುತಿರೆ, ಅಭ್ರ
ಧವಳಿಸುತಲಿವೆ. ಆದರೇನು? ಮಾನಿನಿಯ ನಗೆ-
ಮುಗುಳು ಸುಳಿಯೊಳೆ ನಡುಗಿ ಉಡುಗಿ ಅಡಗುವದು: ದು-
ರ್ಮೋಹ ಪಾಶವೊ ಎಂಬ ಭ್ರಾಂತಿವಿಭ್ರಾಂತಿಯಲಿ.

# ಹರಕೆ

ಮಂದಗತಿ ಮಂದತರವಾಗಿಬಿಟ್ಟಿದೆ; ಹುಲ್ಲೆ-
ಗಂಗಳೊಳು ಚಂಚಲತೆ ಕುಡಿಯೊಡೆಯಲಿದೆ; ಉಡುಗಿ
ಮೈನಯದ ನೆಯ್ಗೆ ತೊಪ್ಪಲು; ಹರೆಯ ಚಿಗುರಡಗಿ
ನೆತ್ತರದ ನೆರೆಗೆಂಪು ಹಳಸುತಿದೆ ಭರದಲ್ಲೆ.
ಹಾರು ಹಕ್ಕಿಯ ಪುಚ್ಛವೆಣಿಸಲೆಳಸಿದ ಬೆಡಗಿ!
ವಿಜಯ ವಿಠ್ಠಲನ ಗುಡಿ ಘಣಗುಡುವ ತೆರದಲ್ಲೆ
ಹರುಹಲಿರುವೆದೆ ಬರಿದೊ ಬರಿದು; ಮಿದು ಸವಿಸೊಲ್ಲೆ
ಹುಟ್ಟದಿದೆ; ಕೈನೀಡಿ ಬೆಳೆದು ನಿಂತಿಯೆ ಹುಡುಗಿ!

ದಿನದ ದಣಿವನು ಕಳೆಯೆ ತಂಗಿ ಹಾರುವ ಹಕ್ಕಿ
ಎರಗದಿರಲಿಲ್ಲಿ. ಕಟ್ಟಾಡಿಸಲು ಬರದಿರಲಿ
ಹುಡುಗ ಗಾಳಿ. ಅನಾದಿವಂಶದಾ ವೈಭವೋ-
ದಯವ ಮೂಸಿಸಿ ಬಿಡುವ ತುಂಬಿ ಬರದಿರು. ನವೋ-
ನವ ಮನೋರಥಸಫಲ ಹೊಸ ಬಸಂತನೆ ಬರಲಿ.
ನಿನಗೆ ಕಾವಲವಿರಲಿ ನಿನ್ನ ಚಂದ್ರಮ ಚಿಕ್ಕಿ.

# ಒಡಲು

ಒಡಲು — ಒಡೆಯನು ತೀರಿಕೊಳಲು ಹುಟ್ಟಿದ ಮನೆಗೆ
ಬಂದ ಹೆಣ್ಣಿನ ಹಾಗೆ. ಅವಳಣ್ಣ ತಮ್ಮದಿರು
ತಮ್ಮದೆನುವೊಲು ಅವಳ ಆಸ್ತಿಪಾಸ್ತಿಯ ಬಳಸಿ
ಬಿಂಕದೋರುವರು; ಅವಳೋ ಇವರ ಒಗೆತನವ
ಕಿಳ್ಳಿಕೇತನು ಗೊಂಬೆ ಕುಣಿಸುವೊಲು ಕುಣಿಸುವಳು.
ಸರಸದುರವಣಿಗೆ ಮೆರವಣಿಗೆ. ಕಣ್ಣೀರು ತ-
ಣ್ಣೀರು. ಮಡದಿಯರಿಗೊಡೆಯರಿದ್ದೂ ಇಲ್ಲ.
ಅವಳಿಗೆ ಮೊದಲೆ ಇಲ್ಲ; ಇದು ದಿನದಿನದ ಬದುಕು.

ಒಡ ಹುಟ್ಟಿ! ತಂತಮ್ಮ ಒಗೆತನದ ಬಗೆಯ ಕಾ-
ಣಿರೆ? ಜಂಭದಲಿ ಏನು ಸುಖವೊ ಕಾಣೆನು. ಒಡೆಯ-
ನಿಲ್ಲದಿಹ ಮನೆಯ ಜನ ಕಡಿದಾಡುವರು ಕೂಡು-
ವರು, ಅಂತೆ, ಯಾರ ಬದುಕೋ ಯಾರು ಬಳಸುವರೊ!
ಎದೆಯ ಹೊಕ್ಕರಣೆಯಲಿ ಹೊಕ್ಕು ನೋಡಿರಿ ತಳದ
ನೆಲೆ, ತಣಿವು ನಲಿವುಗಳ ನಿಲವು ನಿಲುಕುವ ಬಗೆಯ.

# ಗುಮ್ಮ

ಗುಮ್ಮ ಬಂದನು ಸುಮ್ಮನಿರು ಕಂದ, ಅಬ್ಬಬ್ಬ,
ಏನವನ ಕಣ್ಣು? ನಾಲಿಗೆಯೇನು ಕೆಂಪಗಿದೆ,
ಕತ್ತಲಲಿ ಕೆಂಡ ಕಂಡಂತೆ! ಮೆಲ್ಲಗೆ ಬರುವ,
ಸದ್ದು ಸದ್ದಿಲೆ ಕಂದ, ಸುಮ್ಮನಿರು, ಅಳಬೇಡ!
ಕೇಳಿ ಇತ್ತಲೆ ಬರುವನೇನೊ ಗುಮ್ಮ; ನಮ್ಮಮ್ಮ
ಮುಚ್ಚು ಕಣ್ಣನು, ಮಲಗು, ಕಾಣದಿರಲವನ ಸುಡು-
ಗಾಡು ಮೋರೆಯು; ಅವನು ಹುಮ್ಮೆನುವ, ಗುಮ್ಮೆನುವ,
ಬಿಮ್ಮನಿರು, ಕಣ್ತೆರೆಯದಿರು, ಗುಮ್ಮ ಬಂದಾನು.

ಬರದಿರೆಲೊ ಗುಮ್ಮ, ಕಂದನು ನಿದ್ದೆ ಹೋದ, ನೋಂ
ಚಿಗವು! ಸುಳಿವಿಗೆ ಏನ ನಡುನೀರ ಹೊಗುವಂತೆ
ಸ್ತಬ್ಧ ಚೇತನೆ; ಉಸಿರು ಎಳೆಗಾಳಿ ಎಲೆಗಳೊಳು
ಸುಳಿದಾಡುವಂತೆ. ಇಗೊ ಮುರುಳಾಡುತಿದೆ, ಎಲ್ಲೊ
ಯಾವ ಕನಸಿನ ಕೆಳದಿಯೊಡಗೂಡಿ ಆಡುತಿದೆ-
ಯೋ; ಗುಮ್ಮ, ಅಲ್ಲಿಯೂ ಕಂದನಂಜಿಸದಿರೆಲೆ.

# ನೀನು ಮರೆವುದೆ ನನ್ನ?

ರವಿ ಶಶಿಯು ಮತ್ತೆ ಸೂಸುತ್ತ ಬೆಳಕಲಿ ಗುರುತಿ-
ಸುವೆ, ಗುರುವೆ! ಗುರು ಬುಧರ ಹಾಸಂಗಿಯಲಿ ಲೆತ್ತ-
ವಾಡುತಿರೆ ಹೊತ್ತು, ಚಿಕ್ಕೆಯು ಪಟ್ಟದಲ್ಲದರ
ಲೆಕ್ಕವನು ಗುಣಿಸಿ ಎಣಿಸುವೆ. ಮಳೆಯ ಬಸಬಸನ
ತರುವ ಮೂಡಲಗಾಳಿ, ಹಸಿರು ಬಯಲಿಗೆ ತರುತ-
ಲಿರುವ ಪಡುವಲ ಗಾಳಿ, ಹಾಳಿಹದ್ದುಗಳಂತೆ
ತೀಡುತಿರುವುದ ನೋಡುವೆನು. ನೀರು ನೆಲದಲ್ಲಿ
ಬೆದೆಗೊಳುವ ಬೀಜಗಳ ಕಾಂಬೆ; ಮರೆವೆನು ನಿನ್ನ.

ನುಡಿಸುತಿರು ಏಕನಾದವ ಗುರುವೆ! ಜೀವಲಹ-
ರಿಯು ಭೇದ ಒಡೆದು ಕಾಣಲಿ, ಅಭೇದದ ಕಟ್ಟ-
ಡವು ಇಟ್ಟಳಿಸಿ ಬರಲಿ, ಭೂತ ಜಾತದ ವೇದ
ತುದಿಕಳಿಸಿ ನಾಲಗೆಗೆ ಇಮ್ಮು ಚಿಮ್ಮಲಿ. ಶರಣು
ಗುರುಪಾದ, ಜಯ ಪರಾಕು! ಹಸಾದ! ಗತಿಯೆನಗೆ
ನಿನ್ನ ಶ್ರುತಿಯು ಏಡಾಯು. ನೀನು ಮರೆವುದೆ ನನ್ನ?

# ಅಲ್ಲಮ ಪ್ರಭು

ಮನದ ಬಯಲಲಿ ಬವಣೆಗೊಂಡೆ, ಬಿಸಿಲಿನ ಝಳದೆ
ಪುಲ್ಲೆ ಹಂಗಿಸುವ ಹುಸಿನೀರ ಕಾಂಬೊಲು ಕಂಡೆ–
ನೀರ, ನೇಹಿಗ, ನಂಟ, ಬಂಟ, ಸಂವಾದಿ, ಗುರು,
ಶಿಷ್ಯ, ಪ್ರೀತಿಯ ಜಾತಿಗಾರ! ಎಲ್ಲಿರುವೆ ರಸ-
ಸಿದ್ಧ ಗೋರಕ್ಷನುಕ್ಕಿತೆ ಹೊಯ್ದರೂ ಮುಕ್ಕು
ತುಕ್ಕರಿಯದಿದ್ದ ವಜ್ರಕವಚ ಕಳೆದಿಡುವಂತೆ
ಕೆಳಗಿರಿಸಿ, ಕದಳಿಯಲ್ಲಡಗಿ ಕಾಣದೆ ಹೋದ,
ಲಿಂಗ ಲೀಲಾವಿಲಾಸದಲಿ ನಟಿಸದ ಮೂರ್ತಿ?

ವಚನ ವಿದ್ಯಾನಟಿಯು ಕುಣಿಕುಣಿದಳಂದು, ಮು-
ದ್ದಳೆಯ ಸೊಲ್ಲಿಗೆ ವಿವಿಧ ಭಂಗಿಯಲಿ; ಶೂನ್ಯದಲಿ
ಹುಟ್ಟುಗಟ್ಟಿತು ಹದುಳದೊಂದು ಹುಣ್ಣಿಮೆ; ಬೆಡಗು
ಬಿನ್ನಾಣ ಬಿಡಿಸಿ, ಬೆಳುದಿಂಗಳವ ಕುಡಿದ ಮಧು-
ಮತ್ತ ಚಿತ್ತ–ಚಕೋರ ಕೇಳುತಿದೆ, ಹೇಳುತಿದೆ—
"ಬೇರೆ ದರುಶನವೇಕೆ? **ಮಾತೆ ಜ್ಯೋತಿರ್ಲಿಂಗ?**"

# ರತ್ನಾಕರ

ಕೃತಿಗಳೊಳು ನಿನ್ನ ಶೃಂಗಾರ ಪಾವನ ಗಂಗೆ-
ಯೊಲು; ರಸವು ಸಮರಸವು. ರುಚಿಯು ಶುಚಿ,
ಸುಭಗ, ಗಂಭೀರ, ಅಸಮಹಾಸ, ನೂತನ, ರಮ್ಯ.
ಮಧುರತಮದೃಷ್ಟಿ ಸುಖವೃಷ್ಟಿ; ಕಲ್ಪಿಸಲು
ನಂದನದ ಅಂದ ಕಂಡರಿಸಿ ಕುಸುರಿಸಿ ನಗುವ
ಹೂವಾರಿ ಬಗೆ; ದುಗುಡ ದುಮ್ಮಾನಗಳ ಹಗೆಯೊ.
ಜಾತಿರಸಿಕನೆ ನೀನು 'ಹಿಡಿದುದೇ ತಿರುಳು, ನುಡಿ-
ದುದೆ ಹುರುಳು' ನಿಜವಾಗಿ ಲೌಕಿಕವಲೌಕಿಕವು!

ನೆಲಮುಗಿಲುಗಳನೊಂದೆ ಅಂಗೈಲಿ ಹಿಡಿದಂತೆ
ಭೋಗಯೋಗವ ಹೊಂದಿಸಿಹ ದಿವ್ಯ ಭವ್ಯ ಕವಿ!
ರನ್ನ ಬಗೆ, ಹೊನ್ನ ನುಡಿ ಕುಂದಣಿಸಿದವರುಂಟು.
ಉಸುರಿದವರೆಷ್ಟು ಜ್ಯೋತಿಯಲಿ ಜಾತಿಯ ಹೂತು,
ಪರಿಮಳಿಸುವೊಲು ಸಾರ್ವಭೌಮ ಕಣಿ ಕಣಸುಗಳ?
ಹುಟ್ಟು ಋಷಿಯಲ್ಲದನ ಕಬ್ಬ ಹಬ್ಬವೆ ಜಗಕೆ?

# ನಾನು-ನೀನು

ಮುಟ್ಟಿ ನೋಡುವೆನು ಕಾಂಚನಗಂಗೆ, ಎಂದೊಮ್ಮೆ
ಹೂಡುವದು ಗಾಳಿದೇರಿನಲಿ ಲಗ್ಗೆಯು; ಚಂದ್ರ
ಲೋಕವನು ಸೇರಬೇಕೆಂದು ಜ್ಯೋತಿಃಸಾಂದ್ರ
ಆಕಾಶ ಬಾಣಗಳನೇರಿ ಬಯಲಲಿ ಚಿಮ್ಮಿ
ನುಗ್ಗುವದು; ದುರ್ಬೀನುಗಳ ಚಾಚಿ ನಕ್ಷತ್ರ
ಚಕ್ರಪಸರವ ಕಣ್ಣು ತಾಗೆ ಕಾಣುವೆನೆಂದು
ನನ್ನ ಜೀವದ ನಯನ-ತೆರೆ ತಕ್ಕೆ ಬಿದ್ದೀತು
ಸಾಗರಕೆ-ತುತ್ತಲಿದೆ ಆ ವಿರಾಟ ಕ್ಷೇತ್ರ.

ನಿನ್ನ ದರ್ಶನ ಪೂರ್ಣ: ಕೂಸು ಕಣ್ದೆರೆದಂತೆ,
ಮೊಗ್ಗೆಯುಲರಿಗೆ ಅಲರಿದಂತೆ, ಚಿಪ್ಪಿನ ಸ್ವಾತಿ
ಹನಿಯು ಮುತ್ತಾದಂತೆ, ಬಸಿರಹೂವಲಿ ನಿಂತ
ನೀರೆ ಪಿಂಡಾಕಾರ ಬೆಳೆದ ಪದ್ಮಿನಿ ಜಾತಿ.
ಚಣಚಣಕು ಪರಿಪೂರ್ಣ ನೀನು ತಣಿದೇ ದಣಿವೆ;
ನನಗೆ ಪೂರ್ಣತೆಯೆಂದೊ, ನಾನು ದಣಿದೇ ತಣಿವೆ.

# ಮುಡಿಪಿದ ಹೂ

ಬಾಗಿ ಬಾಗದ ಹಠದ ದಿಟದ ಸಾಧನೆಯು ಸಾ-
ಹಸದಲ್ಲಿ, ಜೋಕೆ ತೂಕಗಳಿಂದ ವಿಷವ ಹಿಳಿ-
ದೆಳೆದು, ಜೀವನದ ಸವಿ ಬೆರಿಸಿ, ರಸವನ್ನು ತೊರೆ-
ಯಿಸಲೆಳಸಿ, ನಿನ್ನ ಜೀವನ ಚಂದ್ರಕಲೆ ಮಿತ್ರ-
ತಾಪವನು ನುಂಗಿ ನಗೆಗೂಡಿ, ಬಡತನ ನೀಗಿ,
ತಾಯಿ ನೆಲವನೆ ಸುತ್ತಿಯೊಳಗೊಂಡು ಒಲಿಗೊಂಡು,
ದಿನದಿನಕೆ ಎದೆಯ ಸುಧೆಯಿಂದ ತೀವಿದ ಮೈಯು
ತುಂಬುಗೊಳ್ಳುತ್ತಿರಲು, ಕ್ಷಯವು ನುಂಗಿತೆ ಅದನು!

ಬಾನಬಯಲಿನ ತುಂಬ ನೋಟಗಳೆ ಮೂಡಿದರು,
ಕಾಣಕಾಣುತ ವಸ್ತು ಕನಸು ಗೂಡಿದರು, ಚರಿ-
ತ್ರೆ ಕತೆಯಾದರು, ಮಿಂಚಿದುಸಿರು ಸ್ಮೃತಿಪಥಲೀನ-
ವಾದರೂ—ನಶ್ವರನೆ? ಎಲೆಗೆ ಪ್ರಾಣಜ್ಯೋತಿ!
ಹುಳುಹೊಕ್ಕ ಹೂವನೊಳಹೊಕ್ಕು ಅರಿತವರುಂಟೆ?
ಮಗಮಗಿಸಿ ಹೋದ ನಗೆಹೂವ ಮರೆತವರುಂಟೆ?

# ಕವಿಶಿಷ್ಯ

ಕವಿಗಳಿಗೆ ಗುರುವು ತಾನೆಂಬ ಗರುವಿಕೆಯ ಮರು-
ಭೂಮಿಯ ಮರೀಚಿಕಾಜಲಪಾನಲೋಲನಾ-
ಗುವನು ಆರೆಗಳಿಗೆ, ಬಿಡಿಕರಡುಗವಿತೆಯ ಮೊದಲ
ಒಂದೆರಡು ಸಾಲುಗಳ ಲೀಲೆಯಲಿ ಬರೆದ ಬಡ-
ಗಬ್ಬಿಗನು ಕೂಡ; ಸ್ವಕಪೋಲಕಲ್ಪಿತದ ಕೀ-
ರ್ತಿಯ ಪ್ರತಿಧ್ವನಿಯು ತುಂಬುವದು ಕಿವಿಗವಿಯನ್ನು.
ತನ್ನ ಕೈ ಹಿಡಿವರಾರಿನ್ನು ಇಳೆಯೊಳಗೆನುತ
ಸರಸತಿಯೆ ಕೈಪಿಡಿದ ಕನಸ ಕಾಣುವನಹಹ!

ಸುಕವಿ ಜನಮಿತ್ರ; ನವ ಕವನಕ್ಕೆ ರನ್ನಗ-
ನ್ನಡಿ; ರಸಿಕ; ಸರಸಿಗಳ ಮಧ್ಯದಲಿ ಸರಸಿ; ಮು-
ಪ್ಪಿನಲಿ ಹರೆಯದ ಹಸಿರ, ಹಸುಳೆತನದಾಚೆಗುರ
ಕುಣಿಕುಣಿಸಿ ಕುಣಿದು ಕುಣಿಸಿದ ಮೂರ್ತಿವೆತ್ತ ತೆಂ-
ಗಾಳಿ; ನೀ ಬಂದೆ–ಹಾ, ಪೋದೆ! ಸಾರಿದೆ ಜಗಕೆ:
ಕವಿಶಿಷ್ಯನೆಂಬುವಾ ಕೀರ್ತಿ ಕವಿಗೂ ಮೇಲು.

# ಗಂಧವತಿ

ಗಂಧವತಿ ಪೃಥ್ವಿಯು ಸುಗಂಧ-ಕಂದದ ಬಳ್ಳಿ
ಹಬ್ಬುತಿದೆ ಬೆಟ್ಟಸಾಲುಗಳಲ್ಲಿ; ಗಿರಿಶಿಖರ
ಮುಕುಲದೊಲು ಮೊಗವನೆತ್ತಿವೆ ನಭದಲಲ್ಲಲ್ಲಿ;
ಮಲರುವದದೆಂದೋ *? ಕೊನೆಯ ಪ್ರಳಯ ಪ್ರಖರ
ದ್ವಾದಶಾದಿತ್ಯರುದಿಸಿದ ಮೇಲೆ, ಚಳಿ ತಳ್ಳಿ,
ನವವಸಂತವು ಬರಲು, ಸುರ-ತಾರಕಾನಿಕರ
ಭೃಂಗದಂತೆರಗಿ, ನರುಗಂಪನ್ನು ಹೊರಚೆಲ್ಲಿ,
ಮಗಮಗಿಸೆ ದೆಸೆ, ಆಗ ಮುಗಿಲ ಮೌನವೆ ಮುಖರ.

ಈ ಚಿತ್ತ ಸರಸಿಯಲಿ ಮಧುಕಲ್ಪನಾಕುಸುಮ
ತುರುಗಿ ತುಂಬಿವೆ, ಒಡಲಕಾವಣದೊಳೀ ಪ್ರಾಣ
ಕಾದಲಸಿಗಾಗಿ ಕುಳಿತಿದೆ ಕಾದು, ಗಂಭೀರ!
ಬಾರ, ತಳುವದೆ ಜಗಜ್ಜೀವನವೆ! ಅತಿವಿಷಮ
ಸಂಕಟದೊಳಿದೆ; ತಡೆಯುವರೆ, ತಾನು ನಿತ್ರಾಣ;
ಉಸಿರೊಳುಳಿದಿದೆ. ಮಲಯಪವನ ವಿಲಯಸಮೀರ!

# ಅಭಿರುಚಿ

ಆನಂದದಿಂದ ಬಂದೀ ಜಗದ ರುಚಿಯೆ ಕಹಿ
ಯೆಂದು ಕಾತರಗೊಳ್ಳಬೇಡ, ನಾಲಗೆಯೆ ! ಇದು
ಎಲ್ಲವೂ ಅನ್ನ; ಅದರದರ ರುಚಿಯದಕೆ; ಬಿಡು,
ನಿನ್ನ ಬಯಕೆಯ ಬಣ್ಣವೆರಚದಿರು, ರಸವೆ ಸಿಹಿ.
ಒಗರು, ಸಿಹಿ, ಕಹಿ, ಕಾರ, ಉಪ್ಪು, ಹುಳಿ, ಒಡವೆಯದು;
ರಸವು ರಸಬಲ್ಲ ರಸಿಕನದು ? ಸರಸಿಗೆ ತೆರಹಿ
ತೋರುವದು ಜಗವು ಹೃದಯವ ? ಅರಸಿಕಗೆ ಅರುಹಿ
ಇನ್ನೆ ಸಾವುದೆ ಮಾಯೆ ? ಚೆಲುವನರಿಯದು ಕುರುಡು

ಭಾರತಕು ಭಾರತರವಾದ ಜಗದ ರಹಸ್ಯ
ಉಸಿರೆಣಿಸಿದ ವೇದ ವಾದವಾಯಿತು; ಬೆಳೆವ
ಬೆಳಕಿನ ಮಹಾಪಥವನಳೆವ ಸಾಹಸ ಹಾಸ್ಯ;
ಕಡಲು ಕರೆವುದು; ಕಾಲುವೆಯಲಿ ತಿಳಿಯದೆ ಕೊಳೆನೆ,
ಎಲೆ ಜೀವ! ನಿನ್ನೊಳಗೆ ಜಿಹ್ವೆ ಚಿಗುರಲಿ; ಹಿಂದೆ
ಕಣ್ಣು ಅರಳಲಿ, ಹಿಗ್ಗ ಹಣ್ಣ ಪಡೆಯುವೆ ಮುಂದೆ.

# ದುರ್ಲಭಯುಕ್ತಿ

" ತಿಣುಕದಿರು ಸುಖದ ಸಂಪಾದನೆಗೆ-ಬಂದಿನಿಸು
ನಗೆ, ಇನಿಸು ದುಃಖ ವಿಸ್ಮೃತಿ, ಇನಿಸು ಲೋಕಾನು-
ಭವವು, ರಸಿಕತೆ ಇನಿಸು, ತಾಳ್ಮೆಯಿರೆ ಇನಿಸಾನು;
ಹುಲುಸು ಕಾತಂತೆ ರಸಭಾವ ರೋಮಾಂಚಿತನು.
ಹಸು ಕರುವಿನೆಡೆಗೆ ಕೆಚ್ಚಲುದೊರೆದು ಬರುವಂತೆ,
ಅಂಬೆಗರೆಯಲು ಕರುಳು, ಆನಂದ ತೊರೆಯುವದು,
ಹರಿಯುವದು, ಮೇರೆವರೆಯುವದು, ಹೃದಯದೊಳು ವಿಧು
ಬಿಂಬ ತುಂಬುವದು. ಬರಿದೇಕೆ ಭ್ರಾಂತಿಯ ಚಿಂತೆ? "

ಸುಖ ಸುಲಭ, ಅದರ ಹದ ದುರ್ಲಭವು ಎನುವ ರೀ-
ತಿಯು ರಮ್ಯ! ನಗೆ ಪಾರಿಜಾತ ಸುಕುಮಾರ ಸುಮ,
ಕಲ್ಲೊಳಕ್ಕರ ದುಃಖ; ಲೋಕಾನುಭವ ದರೀ-
ಕುಹರಗರ್ಜನೆ; ರಸಿಕಲಹರಿಯದು ಡಂಭ ಸಮ
ಸರಣಿ; ತಾಳ್ಮೆಯು ಕಪ್ಪೆ ತೂಕ; ಯೋಗವು ಹರೀ-
ಚ್ಛೆಯು; ಸುಖವು ಭ್ರಮವು; ಈ ಮನದ ಪಾಕವೆ ವಿಷಮ.

# ರಸಿಕ:-ವೇದಾಂತಿಗೆ

ನಗೆಯಾಡದಿರು ನನ್ನ ನಲುಮೆ ಒಲುಮೆಯ ಕುರಿತು.
ಅರಿಯೆನೇ ತುಂಬು ಮೈ ಮಾಂಸಪಿಂಡದ ಡಂಭ-
ವೆಂಬುದನು? ನಾಣು ನೆತ್ತರದಾಟ, ಮಧು ಚುಂಬ-
ನವು ಕುನ್ನಿ ಚಿನ್ನಾಟ, ಸಂತತಿಯು ತಂತು ಋತು-
ಮಾಸಗಳ ಮಾಟ; ಅಂತಃಕರಣ ಹುಲು ಡೊಂಬ-
ನೊಲು ಕುಣಿದು ಮಣಿವಾಟ. ಅತಿಥಿ ರೂಢಿಗೆ ಹೊರತು
ಎಸುವ ಮರಣವ ನಾನು ಎಂತು ಬಿಡುವೆನು ಮರೆತು?
ವಸ್ತುವು ಸ್ವಯಂಜ್ಯೋತಿ, ಘನ ಘನ ನಿರಾಲಂಬ!

ನಗೆಯಾಡು; ಬೀಭತ್ಸ ಹಾಸ್ಯದಲ್ಲಿ, ವಿರಕ್ತಿ
ರೌದ್ರವನ್ನುಳಿದು, ಅಭಯುವ ಪಡೆದು, ಭಿನ್ನರುಚಿ
ರಂಜಿಸಲಿ, ತಮವ ಹಿಂಜಿಸಲಿ, ಹರಿಯಲಿ ನಸುಕು.
ನನ್ನ ಒಲುವೆಗೆ ಇದುವೆ ಫಲವೆಂಬೆ. ನಿತ್ಯರುಚಿ-
ಯಾನಂದ ತನುವು; ರಸರಸವು ಮೋಹದ ಮುಸುಕು.
ಸತ್ಯಮಿಥ್ಯವಸರಸೆ, ಸಾಕು ಪ್ರೇಮದ ಯುಕ್ತಿ.

# ಕೃತಿ

ನಿರ್ದೋಷಕೃತಿಯ ನಿರ್ಮಿಸುವೆನೆನ್ನುವ ಪಂಥ-
ಗಾರ ! ಹಂಬಲವೇನೊ ಹಿರಿದು; ಗುಣದೋಷ ಚ-
ರ್ಚೆಯಲಿ ಪಳಗಿದ ಬಗೆಯ ನುರಿತ ನಯದಲಿ ಬಲಿತ
ಕೈ ಚಳಕದಲಿ ಹಿಳಿವೆ ರಸವ, ಜುಬ್ಬರದ ಜಂ-
ಜಡ ಸವರಿ; ಬಯಕೆ ಬರುವಾ ಬಾಲ ಲೀಲೆಯನು
ಹೊಳೆಯಿಸುವ ತೆರ, ಚಿರಂಜೀವ ಸುಕೃತಿಯ ಸಂಚ-
ಕಾರ ! ನಿನ್ನೀಮಸೆದ ಮನದ ಹರಿತಾದ ಕಣ್
ನೋಟ, ಹೃದಯದ ಓಟ, ಬೆಳಕ ನಡಿಗೆಗು ಮಿಗಿಲು.

ಕೃತಿಯ ರಚಿಸದೆ ಕೃತಾರ್ಥವೆ ಜೀವ ? ರಸ ಮ-
ರ್ಮಿಯು ರಸದ ಯೋಗ ಕೊಡಬಲ್ಲುದೆ ? ಕಾಣೆವೇ
ಹಸಿರಹುಲ್ಲಲಿ ಬಂಜೆಬಯಲ ಬಸಿರನು ಮುಚ್ಚ
ಲಿಳಿಸುವದ ? ಜೀವದಾ ಹಸಿವು-ನೀರಡಿಕೆ ಅದ-
ಕೂ ಮೇಲು. ಹಡೆದು ಪಡೆಯುವ ಪೂರ್ಣ ಸುಖ ಸಹಜ !
ತಮ್ಮ ನೆರಳಿಗೆ ಹೆದರಿ ಮೈಗರೆಯುವರೆ ಹಗಲು ?

# ಅಗಸ್ತ್ಯ

ವಿಂಧ್ಯದ ಅನುಲ್ಲಂಘ್ಯ ಮಸ್ತಕವ ಮೆಟ್ಟಿ, ದ-
ಕ್ಷಿಣದ ದಾರಿಯ ತೆರೆದು ತೋರಿದಿರಿ; ಉತ್ತರಕೆ
ಉತ್ತರೋತ್ತರವಾಯ್ತು. ದಕ್ಷಿಣದ ಏಳ್ತರಕೆ
ಎಡೆಯಾಯ್ತು. ನಿಮ್ಮ ಪಾವನ ಪಾದ ಮೆಟ್ಟಿದ-
ಲ್ಲಲ್ಲಿ ತೀರ್ಥಕ್ಷೇತ್ರ. ಮುಕ್ತಿ ಗಂಗೆಯು ಇಳಿದ
ಭಕ್ತಿ ಭೂಮಿಯು ತಮಿಳದೊಳು ಕನ್ನಡದ ಹರಕೆ
ಹೊತ್ತಿತ್ತು, ಒಪ್ಪಿಸಿತು, ವೇದ ಮೊಳಗಿತು. ಗೊರಕೆ
ಹೊಡೆಯುತಂಥಾಸುರನು ಅಡವಿಗವಿಯಲ್ಲುಳಿದ.

ಹೊಂದುಗೂಡಿಕೆಗೆಡುತಲಿದೆ. ಇತ್ತ ಅನಿವಾರ್ಯ
ಶಾಸ್ತ್ರಶಸ್ತ್ರದೊಳೆ ಮಾಡಿಹರು ಬೆಳಕಿನ ಕೊಲೆಯ.
ಆತ್ಮನಾದಿಯನಾರ್ಯ ಕತ್ತಲೆಯು ಕೃತ ಕಾರ್ಯ-
ವಾಗಲಿದೆ. ಇವ ಬಿಳಿಯ, ಕರಿಯ; ಹಾರುವ, ಹೊಲೆಯ;
ಎಂದು ಇತ್ತಂಡದೊಳು ಕತ್ತರಿಸಲಿಹರಾರ್ಯ!
ಮೂಢ ವಿಂಧ್ಯ–ಪಿಶಾಚ್ಯ ಮನದೊಳೆತ್ತಿದೆ ತಲೆಯ.

# ಒಡನುಡಿ

ದುಃಸಾಧ್ಯಸಂಭಾವ್ಯವೆಂಬ ಸೊಲ್ಲಿನ ಗುಲ್ಲು ಗುಡುಗಾಡುತಿದೆ. ಕನ್ನಡದ ಕನ್ನಡಿಯು ಒಡೆದು ಬೆಸೆಯ ಬರದಂತೆ ದೆಸೆದೆಸೆಗೆ ಬಿದ್ದಿದೆ. ಹಿಡಿದು ಕಟ್ಟಬಲ್ಲಾ ಕೈಯೆ ಕಾಣದಿದೆ. ಒಣಹುಲ್ಲು ಬೆಳೆಯೆ, ಹೂದೋಟ ಹುದುಗಿದೆ ನೆಲದೊಳೆಲ್ಲೆಲ್ಲು. ಜನದ ಜಂಗುಳಿಯಂತೆ ಹಿಂಡಾಗಿ, ಮನ ತಡೆದು ನಿಂತಿದೆ, ನಿರಾಯಾಸ ಮೆಲುಕು ಹಾಕುತ. ಹಿಡಿದು ಪೂರ್ವ ವೈಭವವು ಉಃಶಾಪ ಕೋರುವ ಕಲ್ಲು.

“ಶ್ರೀ ಕನ್ನಡದ ಧೂಳಿ ಬಾಂದೊರೆಯೊಳೋಕುಳಿಯ ನಾಡೀತು. ಸೂರ್ಯ ಮಾಲೆಯು ರಾಸಲೀಲೆಯುದು ಕನ್ನಡದಿ ಬಣ್ಣಸೆಯ ಪಡೆದೀತು, ಪರಿಶುದ್ಧ ಕನ್ನಡರ ಕೀರ್ತಿ ನಾಡಿಗೆ ಪ್ರಭಾವಳಿಯ ಕುಡಿಯೊಡೆಸೀತು. ಓಂ ಸ್ವಸ್ತಿ”– ಯೋಗಸಿದ್ಧಿಯೊಳಿದ್ದ ರತ್ನಸಿಂಹಾಸನವು ಎದೆಯೊಳೊತ್ತನುಡಿಯುವುದು.

# ಸುಹೃದ

ಎಲೆ ಸುಹೃದ, ಸರ್ವ ಭೂತಾಂತರಸ್ಥನೆ, ಸರಸ
ನಾರಾಯಣನೆ, ನಿನ್ನ ವೈತ್ರಿಯು ಉಗಾಭೋಗ
ಉಸಿರು ಈ ಹಕ್ಕಿಯಲಿ; ತುಂಬು ಜೀವವ ದೇವ.
ಯುಗಜುಗದ ಪರಿಪಾಕದಿಂದ ಬರಲಿರುವಂಥ
ಸ್ನೇಹಸಾರದ ಹದವನರಿವೆವೇ ? ಕ್ಷಣಜೀವಿ-
ಗಳು ನಾವು, ಕಣ್ಣ ಆಚೆಗೆ ಕಾಣದಿರುವ ಕುರು-
ಡರು. ತನ್ನದಲ್ಲದುದು ತಲೆಯೆತ್ತಿತೆಂದು ತಲೆ-
ಕೆಡಿಸಿಕೊಳ್ಳುವ ಮೂಢ–ಜಡ–ಮಂದ ಪ್ರಾಣಿಗಳು.

ನಾಳೆ ಬರುವದು ಬರಲಿ. ಹೃದಯ ಪುಷ್ಕರಣಿಯಲಿ
ಮಳೆ ನೀರು, ಹೊಳೆ ನೀರು, ಕೊಳೆ ನೀರು, ಕೊಚ್ಚಿ ಬರ-
ದಿರಲಿಂದು. ನಾಡಾಡಿ ಹಕ್ಕಿಗಳ ಕೂಡಿ ಕಲೆ
ಬೆರೆತಿರಲು, ಕುಡಿದುದೇ ತೀರ್ಥವೆನದಿರುವಂತೆ
ಕರುಣಿಸಲೆ ಉತ್ತರೋತ್ತರವನು. ಹಿಮಾಲಯದ
ಮಾನಸ ಸರೋವರದ ಗಂಗೆ ಕಲಕಿದುದುಂಟೆ ?

# ಸತ್ಯಸಂಕಲ್ಪ

ಜನ್ಮಜನ್ಮಾಂತರದ ಸತ್ಯಸಂಕಲ್ಪವೇ,
ಫಲಹೊಂದು ಕಾಲ ಬಂದಾಗ. ಒಗರಿಳಿದು ಹುಳಿ
ಹೋಗಿ, ಸವಿ ಹವಣುಗೊಳುತಿರೆ, ಬಣ್ಣ ಹೊಂಬಣ್ಣ-
ಕೇರುತಿರೆ, ಬಳುಕಿ ಗಾಳಿಗೆ, ಬೆಂದು ಬಿಸಿಲಿನಲಿ,
ನಾನು ಕಾಯುವೆ; ಹಸಿವು ಎಸರೇರಿ ಕುದಿಬಂದು
ಉಕ್ಕಿ ಹೋಗಲಿ. ಉರುವಲಿಲ್ಲದಲೆ ಉರಿಯುತಿದೆ
ಕಿಚ್ಚು. ಕಡೆಯುತ್ತಲಿದೆ ನೀರು ಸೆಲೆಯುಂತೆ. ಬಂ-
ದಂದು ನೀನಮೃತಫಲ. ಹುಸಿಯು ಅಸಿವಸಿ ಸಾಕು.

ಇಂದೆ ಬರುವೆಯೋ ಏನೋ ಎಂದು ತವಕದ ಬಯಕೆ,
ನೋಂತು ನೀರೆಯು ನಲ್ಲನೆಲ್ಲಿ ಬರುವನೊ, ಸಕಲ
ಸಿಂಗಾರ ಸಲಕರಣೆ ಸರಿಯಿರಲಿ ಎನುತ, ದಿನ-
ದಿನವು, ಹಗಲಿರುಳು ಅಣಿಗೊಳುವಂತೆ, ಹಸಿಯಾಸೆ
ತೊಳೆಯುತಿದೆ; ಹುಸಿಮುನಿಸ ಕಳೆಯುತಿದೆ; ಬಗೆಯು ಹಿ-
ಗ್ಗಲಿಸುತಿದೆ; ತನ್ನ ಒಳಹೊರಗೆ ಬೆಳಗುತ್ತಲಿದೆ.

# ಚಿದಂಬರ

ಕುಲವಧುವಿನೊಲು, ಅಡಕದಲಿ ನಗುವ ಕೌತುಕ–ಕು-
ತೂಹಲದ ಕಣೆಯ ಕಣ್ಣಲಿ ತೆರೆದು, 'ಮುಗಿಲ ನೀ-
ಲಿಯ ಕುಡಿದು ಜಿಳಿದು ಮಾಡುವೆ'ನೆಂದು ಹಸಿದ ಹ-
ಕ್ಕಿಯ ಹುಡುಗ! ಗುರುವೆನುವ ಗರುವಾಯಿಯಲಿ ನಿಂತಿ-
ರಲು ಇದಿರುಗೊಂಡೆ ನನ್ನನು ನೀನು, ಹುಡುಗ ಹಿಂ-
ದಿನ ಪುಂಡತನದಿ ಬೆಳೆದವನನ್ನು. ಕನ್ನಡದ
ಕನ್ನಡಿಯು ಬೆಳಗಲಿತ್ತಾಗ, ಕಂಡೆವು ನಮ್ಮ
ರೂಪವನು. ಕನ್ನಡದ ಕಳಸ ಕಣಸಲಿ ಕಂಡೆ.

ಕನ್ನಡದ ಗುಡಿಯು ಕಟ್ಟುವ ಎಳೆಯ ಗೆಳೆಯರೊಳು
ನೀನು ಮೊದಲಿಗ ನನಗೆ. ಸ್ನೇಹ–ಸಿಂಹಾಸನದ
ಶೂನ್ಯ ಪೀಠದಿ ಪಟ್ಟಗಟ್ಟಿ, ಓರಿಗೆ ಜೊತೆಯ
ಎಳೆಯರನು ಎರಡು ಕೈಯಲಿ ತಂದೆ. ಕಲ್ಲ ನಿ-
ಕ್ಕಿದೆ ಅಡಿಗೆ; ಗುಡಿಗೆ ಗತಿ ಇಲ್ಲ. ಎಲ್ಲಿದೆ ಶಕ್ತಿ?
ನಿಬ್ಬೆರಗುಗೊಂಡ ಹೆಬ್ಬಯಲು ಹಬ್ಬಿದೆ ಗೆಳೆಯ!

# ಶ್ರೀನಾರಾಯಣ

ಸ್ಫೂರ್ತಿಯೇ ಮೂರ್ತಿಗೊಂಡಂತೆ ಕಂಡವು ಆನೆ ಕುದುರೆ ಹಾ-
ವುಗೆ, ನಿನ್ನ ಹೊಸ್ತಿಲನ ದಾಟಿ ಇಲ್ಲಡಿಯಿಟ್ಟೆ;
ವಿಜಯ ಮಾಡಿಸಿದೆ ವೈಭವದಿ, ದಿಗ್ವಿಜಯ ಮಾ-
ಡುವೆ, ಕುರುಹಗಳ ತೋರಿ ಹೇಳುತಿಹೆಯಾ, ನಲ್ಲ!
ನನಸೆಂದು ತೋರಿ ಹಾರೈಸಿದುದು ಕನಸಾಗೆ,
ಕನಸು ಕನ್ನಡಿಯ ಗಂಟೆಂದೆನಲೊ, ಕಣಸೆಂದು
ಹಿಗ್ಗಿ ನುಗ್ಗಲೊ, ಜೀವ ತಾನಪೂರ್ವವ ಕಂಡು
ಸಂಕೋಚ ವಿಸ್ತಾರದಲ್ಲಿ ತೇಂಕಾಡುವುದು.

ನೇತ್ರ ಪಲ್ಲವಿಗೆ ಭುಲ್ಲಯಿಸಿರುವ ಮುಗ್ಧ ಮಾ-
ಧುರ್ಯನೇ! ಕನ್ನಿಕೆಯ ಕಾಲುಂದುಗೆಯ ಅಂದ-
ದೊಳು ಕುಣಿಸದಿರು ಬಗೆಯ; ನಲ್ಲ ನಿನ್ನೊಳಗೆ ಅನು-
ರಾಗಿಯಿರಬಹುದು, ನಿನ್ನನು ಹುಡುಕಿ ನಾಳೆ ಬರ-
ಬಹುದು, ಬಹನು. ಅರಸನ ಕಂಡು ಪುರುಷನ ಮರೆತೆ
ನೋಡು. ಕಾಮಿನಿಯೆ! ಅಡಿಯಾಗು, ವಾಹನವಾಗು.

# ಗಾರುಡಿಗ

ಇದು ಮಂತ್ರ; ಅರ್ಥಕ್ಕೊಗ್ಗದ ಶಬ್ದಗಳ ಪವಣಿಸುವ ತಂತ್ರ;
ತಾನೆ ತಾನೆ ಸಮರ್ಥಛಂದ; ದೃಗ್ಬಂಧ–ದಿ-
ಗ್ಬಂಧ; ಪ್ರಾಣದ ಕೆಚ್ಚು ಕೆತ್ತಿ ರಚಿಸಿದೆ; ಉಸಿರ
ಹೆದೆಗೆ ಹೂಡಿದ ಗರಿಯು ಗುರಿಯ ಸಿರಿಯಿಟ್ಟು ಬರು-
ತಿದೆ ತೂರಿ ಲೀಲೆಯನಾಯಾಸ. ಗರುಡಸಂ-
ತೆರಗಿ ಬಂದಿತು–ಭ್ರಮೆಯೊ ? ಹಮ್ಮುದವೊ ? ಸಂಜೊ ! ಮರ-
ಣವೊ ? ನಿದ್ದೆಯೋ ! ಮೋಹನವೊ ! ಎಚ್ಚರಕೆ ಕವಿದ
ಮರೆವೊ ! ಕನಸೋ ! ನನಸು–ಎಲ್ಲ ಹಾಲೋ ಹಾಲು !

ಎಲೆ ಹಾವೆ ! ಹೊಟ್ಟೆಹೊಸೆಯುವ ಜಂತು ! ನಿನಗೆ ಕಿವಿ-
ಯಿಲ್ಲ, ನಾಲಿಗೆಯೆರಡು; ಹಲ್ಲೊಳಿದೆ ವಿಷವು; ನಿ-
ನ್ನನ್ನ ಗಾಳಿಯು; ನೀನು ಪಾತಾಳಕಿಳಿದರೂ
ಮತ್ತೆ ಕಾಡುವೆ; ರಸಿಕನೆನೆ ಜಂಡ ತಲೆದೂಗಿ
ನಾಳೆ ಕಾರುವೆ ಗರಳ ! ಬಯಸುತಿರು, ಬಯಸುತಿರು . .
ಕಂಡಿಲ್ಲವೇನೊ ಅಂಗೈಯ ಗರುಡನ ಗೆರೆಯ !

# ಹಾಳಿ ಹಡಗ

ತೇಲಿಬಿಡುವೆನು ಹಾಳಿ ಹಡಗಗಳ, ಹುಡುಗರಾ-
ಟದೊಳೆಂತು ಅಂತು, ಕಾರ್ಮೋಡದ ಕತ್ತಲೆ ಕವಿದ
ಹೊತ್ತು ಹೊರಪಾಗಿ ಬೆಳಗುವವರೆಗೆ, ಮನೆಯ ಕಸ-
ಪಸೆ ಸರಕು ಮಾಡಿ; ಕೆರೆಕಾಲುವೆಯನೊಂದು ಗೊಳಿ-
ಸುವ ಜಲಾದ್ವೈತದೀ ಕೆಂಪು ಹೊಳೆಯಲಿ, ಹಳ್ಳ-
ಪಿಡಿದು ಹೋಗಲಿ. ಹುಚ್ಚು ಮಳೆಗಾಳಿಗಳಿಗೇಡೆ
ಪುಲು ಹಡಗ? ಲಾಭ ಹಾನಿಯ ಲೆಕ್ಕ ಹೊತ್ತಿಗೆಯೊ-
ಳಿರಲಿ, ಬೆರಗಲಿ ಮೆಚ್ಚಿ ಕುಣಿದಾಡಿದುದೆ ಬಂತು.

ಒಡಲು ಉಡಿಗೆಗಳಂತೆ ಮಾಸಿ ಪಿಸಿವುದು; ಉಸಿರು
ಹಸಿವೆ ನೀರಡಿಕೆಯಲಿ ಕುಸಿಯುವದು; ಬಗೆಯು ಗಂ-
ಧರ್ವನಗರಗಳನ್ನು ಕಟ್ಟಿ, ಬರಿದೊರೆ ಹರಿಸಿ,
ಮುಗಿಲ ಮಲ್ಲಿಗೆಯ ಕೊಯ್ದೀಡಾಡಿ ಮೂಸಿ, ಚಿ-
ತ್ತದ ಭಿತ್ತಿಯಲಿ ಮೂಡಿದಂಥ ಚಿತ್ರಗಳಲ್ಲಿ
ಜೀವಕಳೆದುಂಬಿ, ಸ್ವರ್ಗವ ಹಡೆದು ಪಡೆಯುತಿದೆ.



5

# ಪರಿವಿಡಿ

# ರಸಿಕ

ನನ್ನೆದೆಯು–ನಿನ್ನೆದೆಯು; ನಡುವೆ ಕ್ಷಾರೋದಧಿಯು !
ಕಾಡಿನಲಿ ಅತ್ತಂತೆ ಎಲ್ಲ ಹಾಡು !
ತಂತಮ್ಮ ಕಂಬನಿಯಲೆಲ್ಲರೂ ಮುಳುಗಿದರೆ
ಕೆಳೆಯ ಬೇಡುವ ಎದೆಗೆ ಯಾರು ಜೋಡು ?

ಅರಿವಿನಾಳದೊಳಿರುವ ಅಣಿಮುತ್ತುಗಳನೆತ್ತಿ
ಪವಣಿಸುವ ಜಾಣು ಬಗೆಗೆಂದು ಬಹದೊ ?
ಸೂಜಿಗೂ ಹದನು, ಎಳೆನೂಲಿಗೂ ಪಿಂದುವಾದ
ನುಡಿನುಡಿಯು ನಾಲಗೆಗೆ ನಿಲುಕಲಹುದೊ ?

ಹೆಣೆದು ಹೂ–ಹೊರೆ–ಹಾರ ಹಾರಗಳನು
ಕಳುಹುವೊಲು ಗಾಳಿಯಲಿ ಹಾಡುಗಳನು;
ಕಳುಹಿ ಎದೆವಾತುಗಳ ತಣಿವೆನೆಂದು
ರಸಿಕ ! ನಿನ್ನೆದೆ–ಕೊರಳಿಗಿಂಪ ತಂದು ?

# ಅಗಮ್ಯ

ಮಾಯೆ ಮೈವೆತ್ತು ನಟಿಸುವಳೊ ಹೆಣ್ಣಲಿ ನಿಂತು;
ಕಣ್ಸಳಿಸಿ, ಮನಸವ ಕುಣಿದಾಡಿಸುವಳು.
ಕೂದಲಿನ ಆಳದಲಿ, ಕುರುಳುಗಳ ಗಾಳದಲಿ,
ಬಾಳೆಮೀನದ ಹಾಗೆ ಆಡಿಸುವಳು.

ಮೊಗದಲಾವುದೊ ಹಗಲು ಮುಸುಕ ತೆರೆವುದೊ ಏನೊ !
ತುಟಿಯಲಾವುದೊ ಸಂಜೆ ಸೆಳೆವುದೆತ್ತೊ!
ಕಣ್ಣುಕತ್ತಲೆಗವಿಯೆ, ನಗೆಯು ಮಿಂಚುಲ್ಲಟಿಸೆ,
ಚಿಕ್ಕೆ ಕಣ್ಣಿಕ್ಕುವೊಲು ಮಿಟುಕತಿತ್ತೊ !

ದಿನದಿನಕೆ ಯುಗಯುಗಕೆ ಜೀವ ಸೋಲೆ
ಹೀಗೆ ಸಾಗಿಹುದೇಕೊ ಮೋಹಲೀಲೆ ?
ಎಂದಿಗೂ ಏಗಳೂ ಇತ್ತು ರಮ್ಯ;
ಇಂದಿಗೂ ಈಗಲೂ ಇಹುದಗಮ್ಯ.

# ಅದೃಷ್ಟ

ಕಣ್ಣುಕಾಣ್ಕೆಯ ಮೀರಿ, ಕಣ್ಣುಕಟ್ಟಿದ ರೂಹೆ!
ಬಣ್ಣನೆಯ ಬಣ್ಣಕೂ ಸಿಗದೆ ನೀನು;
ಹುಟ್ಟುಕಟ್ಟನು ಹರಿದು, ಹಾರುತಿರುವೀ ಊಹೆ,
ಬರೆಯಲಿಕೆ ನಿನ್ನನ್ನೆ ಹವಣಿಸುವದೇನು?

ಲಹರಿಗೂ ತರಲ, ನೀ ನೆರಳಿಗೂ ವಿರಲ, ಸುಳಿ-
ಯೆಲರಿಗೂ ಚಂಚಲನು ಇರುವೆಯಂತೆ—
ಬರುವಾಗ ಬರಲಿ ಫಲವೆಂದು ತಾಳ್ಮೆಯ ತಾಳಿ
ಕಾಡಹೂವಿನ ತೆರದಿ, ಕಾದು ನಿಂತೆ.

ನವಿರನವಿಲಿಲ್ಲಿ ನಿಮಿನಿಮಿರಿ ಕುಣಿಯುತಿದೆ
ಕಂಬನಿಯ ಜಡಮಳೆಯು ಜಿನುಗಿ ತಣಿಯುತಿದೆ
ಹೊಚ್ಚಹೊಸ ಆಸೆಗಳು ಚಿಗಿತು ನಗೆ ನನೆತು
ಫಲವೇನೆ ಬರಲಿ, ಅಣಿಯಾಗಿರುವದಿನಿತು.

# ಗೃಹಿಣಿ

ಏಳು ಮೆಟ್ಟಿನ ಹುಲಿಯ ಬೀರ ಬೇಂಟೆಯ ಬಿಡಿಸಿ
ಮಗುವ ಮುದ್ದಾಡುವೊಲು ಮಾಡಿದಾಕೆ.
ಗುರಿಯಿಟ್ಟ ಕಣ್ಣುಗಳ, ಕಿವಿಯೂದಿ, ಹೊರಳಿಸುತ
ತಾನೆ ತನ್ನಷ್ಟಕ್ಕೆ ಹಾಡಿದಾಕೆ.

ತಳಿರಿನುಡುಗೆಯನುಟ್ಟು ಗರಿತೊಡುವುಗಳ ತೊಟ್ಟು
ಅಡವಿಯಲಿ ಹೂದೋಟ ಮಾಡಿದಾಕೆ.
ಗಿಡಕೆ ಗುಡಿಯನು ಕಟ್ಟಿ, ಬೇರೊಂದು ಲೋಕವನು
ಮೂಕಮಾತುಗಳಿಂದ ಬೇಡಿದಾಕೆ.

ಮನೆಯ ಹೊಸ್ತಿಲಿಕೆ ಶುಭ ಒರೆಯುವಾಕೆ.
ಮಂಗಲವೆ ಬಾರೆಂದು ಕರೆಯುವಾಕೆ.
ಬಾಳಸುಳಿಯಲಿ ಬೆಳೆಯ ತೋರುವಾಕೆ.
ದಿನದಿನವು ನವ ಜಯವ ಕೋರುವಾಕೆ.

# ಒಲವೆಂಬ ಹೊತ್ತಿಗೆ

ಒಲವೆಂಬ ಹೊತ್ತಿಗೆಯನೋದ ಬಯಸುತ ನೀನು
ಬೆಲೆಯೆಷ್ಟು ಎಂದು ಕೇಳುತಿಹೆ ? ಹುಚ್ಚ !
ಹಗಲಿರುಳು ದುಡಿದರೂ, ಹಲಜನುಮ ಕಳೆದರೂ
ನೀ ತೆತ್ತಲಾರೆ ಬರಿ ಅಂಚೆವೆಚ್ಚ.

ಬೆವರ ಹನಿಯಲಿ ಹಲವು, ಕಣ್ಣೀರಿನಲಿ ಕೆಲವು
ನೆತ್ತರದಿ ಬರೆದುದಕೆ ಲೆಕ್ಕವಿಲ್ಲ.
ಚಿತ್ರ ಚಿತ್ರಾಕ್ಷರದ ಲಕ್ಷಪತ್ರಗಳುಂಟು;
ನಕ್ಷತ್ರ ಓದುತಿವೆ ಮರೆತು ಸೊಲ್ಲ.

ಏಸಿಹುದೊ ಎಂತಿಹುದೊ ಸಂಸಾರಸಾರ!
ಕಂಡವರು ಯಾರದರ ಅಂತಪಾರ?
ಹೃದಯ ಸಂಪುಟದಲ್ಲಿ ಒಲವ– ಲೆಕ್ಕಣಿಕೆ
ಮಾಡಿ, ಬರೆಯಲೊ, ಹುಡುಗ, ನಿನ್ನ ಒಕ್ಕಣಿಕೆ.

# ಸಾಹಿತ್ಯ-ಕೇಳಿ

ತಂತಾನೆ ತಣಿವಿನಲ್ಲಿದ್ದ ತಲ್ಲೀನತೆಯು
ನಿದ್ದೆ ತಿಳಿದೆದ್ದಾಗ ಎನಿತೆನಿತು ಶಾಂತಿ !
ಬಾಯಿಲ್ಲದನುಭವದ ನೆನಪೆ ನನೆಕೊನೆಹೋಗಿ
ಕನಸೆ ನನಸಾಗಿರಲದೆಂಥ ನವ ಕಾಂತಿ !

ಆಟವೇ ಹಿಗ್ಗು ? ಒಡನಾಟವೇ ಹಿರಿ ಹಿಗ್ಗು
ನೋಟದ ವಿಲಾಸವೇ ಗುಡಿಕಟ್ಟಿದಂತಿದೆ.
ಒಂದು ಹಿಗ್ಗಿನ ಪಲ್ಲ, ಹಲವು ನುಡಿಯುಲಿ ಹರಿಯೆ
ಆಟಪಾಟದ ಹಾಡು ಕಳಸವಿಟ್ಟಂತೆ !

ವಾಣಿ ವೀಣಾರವಕೆ ಇವಳು ತಂಗಿ;
ಗಂಗೆ ಇಳೆಗಿಳಿವಂತೆ ಇವಳ ಭಂಗಿ;
ಇಲ್ಲಿಲ್ಲ ನಾಡಾಡಿ ಹಾಡುಗಬ್ಬ;
ಒಳಬಗೆಯು ಹಿಗ್ಗಿಗಿದು ಹುಟ್ಟುಹಬ್ಬ !

# ಆದಿಕವಿ

ಕೊಕ್ಕಿನಲಿ ಕೊಕ್ಕು, ರೆಕ್ಕೆಗೆ ರೆಕ್ಕೆ, ನೋಟದಲಿ
ನೋಟ ಹುದುಗೊಳಿಸಿರುವ ಹಕ್ಕಿಯೆರಡು–
ಎಲೆ ಚವರ ಬೀಸೆ, ಹೂಗಂಪು ಸಲೆ ಸೂಸೆ, ಎಲ-
ರೂದೆ, ಬೆಳಕಾಡೆ– ಹೊರ ಜಗವ ಮರೆದು

ಕೂಡಿರಲು, ಬೇಡನೊಡ ನೋಡಿರಲು, ಗುರಿಯಿಡುತ
ಹೂಡಿದನು ಎದೆಮಾಡಿ ಹೆದೆಗೆ ಕಣೆಯ,
ಒಂದು ನೆಲಕುದುರೆ, ಇನ್ನೊಂದು ಬಾನ್ ಬಿರಿವಂತೆ
ಚೀರುತಿದೆ–ಅಗಲಿದರು, ಗೆಳತಿಗೆಣೆಯ !

ವಾಲ್ಮೀಕಿಯ ಕಿವಿಸೇರಿ ಎದೆಸಾರೆ ಕೂಡ,
'ಒಗೆತನದ ಹಗೆ ಸಾಯಲಿವನೆ ಬೇಡ'
ಹಾಡು ಬರೆ; ವೇದಕವಿ ಆದಿಕವಿಗೆ
ಎಂದ : 'ಸೋತೆನು ಛಂದದೊಂದು ಸವಿಗೆ.'

# ಮೈತಳೆದ ಕರುಣೆ

ಮೈತಳೆದ ಕರುಣೆ ಮೈಮರೆತು ಕುಳಿತಿದೆ ನೋಡು
ಯೋಚನೆಯು ಯೋಜನೆಯು ಕುರಿತು ಬೆರೆತು.
ಜಗದ ಉದ್ಧಾರಕ್ಕೆ ಜಗಕೆ ಅವತರಿಸಿಹುದು
ನೊಗ ಹೊತ್ತ ರೀತಿಯಿಂದು ಜಗಕೆ ಹೊರತು.

ಇದುವೆ ಮುಕ್ತಾಸನವೊ ? ಏನು ಯುಕ್ತಾಸನವೊ ?
ಕೂಡಿಹವು ಚಿಂತೆ ಚಿಂತನಗಳಿಲ್ಲಿ
ಎಡಗೈಯು ಭಾರವನು ಬಲಗೈಯು ತಾಳಿರಲು
ಅಚ್ಚ ಮೂರ್ತಿಯು ಧ್ಯಾನ ಮುದ್ರೆಯಲ್ಲಿ :–

" ಭೂಗರ್ಭದಲ್ಲಿ ಕಲ್ಕುದಿಯುತೆಸರಾಗಿ
ಜಗದ ಜ್ವಾಲಾಮುಖಿಯು ಕಿಚ್ಚುಸಿರಾಗಿ
ಹೊಮ್ಮಲಿದೆ, ಚಿಮ್ಮುತಿದೆ. ತಣಿವುದೆಂತು ಎಲಾ ?
ಜನದ ತಾಪತ್ರಯಕೆ ಅಂತವಿಲ್ಲವಲಾ ! "

# ದಬ್ಬಾಳಿಕೆಗೆ

೧

ನೆತ್ತಿಗೇರಿದ ಕಣ್ಣ ಕುರುಡು ದಬ್ಬಾಳಿಕೆಯು!
ಪೊಳ್ಳು ಬಿಂಕದ ಮೂಗ ಮೇಲೆಮಾಡಿ,
ಹಿಂಬರಿಕೆಯುಡಿಯಲ್ಲಿ ಸಿಕ್ಕು ತೊತ್ತಳಿಗೊಂಡು
ನಾವವರ ನರಳಿಕೆಯ ಕಿವುಡುಗೇಳಿ,

ಇಲ್ಲಿಯೂ ಅಲ್ಲಿಯೂ ಕೊನೆಗಾಣದಾಸೆಗಳ
ಅಂತರ ಪಿಶಾಚಿಯೋ! ತಣಿಸಲೆಳಸಿ
ರಕ್ಷಕನು ಎಂದು ತಿಳಕೊಂಡ ರಾಕ್ಷಸನು ನೀನು.
ನಿನ್ನ ಕರುಳನು ತಿಂದುಕೊಂಡ ಕರುಣೆ!

ಕ್ಷಮೆಗು ನಿನಗೂ ಜಾತಿವೈರವಿಹುದಲ್ಲ!
ನ್ಯಾಯ ನೀತಿಗಳೆರಡು ನಿನ್ನವೇ ಅಲ್ಲ!
ಪ್ರಳಯತಾಂಡವದ ಪ್ರತಿನಿಧಿಯು ನೀನೇನು?
ನರಕಯಾತನೆಯ ಮಾನಸಪುತ್ರ ನೀನು!

# ದಬ್ಬಾಳಿಕೆಗೆ

೨

ಯಜ್ಞಕುಂಡದ ಹಾಗೆ ಹಗಲಿರುಳು ಹೊತ್ತುತಿಹ
ತವಸಿಗಳ ಎದೆಯ ವೇದಿಕೆಯ ತುಳಿದು,
ಜ್ಞಾನಶಕ್ತಿಗೆ ಇಟ್ಟ ನಿತ್ಯನಂದಾದೀಪ-
ದಂಡ ಮಿಂಡುಳಿನ ತಲೆಗಳನ್ನು ಮುಟ್ಟಿ,

ಸತ್ಯವೀರರ ನಿತ್ಯ ಶುದ್ಧ ನಾಲಗೆಯಿಂದ
ಬಂದುನಿರ ಕಣೆಗಳಿಗೆ ಬೆನ್ನುಗೊಟ್ಟು,
ಪ್ರೀತಿವಾತ್ಸಲ್ಯಕ್ಕೆ ಅಭಿಷೇಕ ಗೈಯುತಿಹ
ಸಾಧ್ವಿಯರ ಕಣ್ಣೀರ ನಂಜ ಕುಡಿದು,

ನಿನ್ನ ಕೋಪದ ಪಿತ್ತವನು ಕಾರಿಕೊಂಡು
ಆದರ ಕೋಪದ ಹಿರಿಯ ಹೊರೆ ಹೇರಿಕೊಂಡು
ಮುಕ್ಕರಿಸಿ ಮುಗಿಬಿದ್ದು ಕಣ್ಮುಚ್ಚಿ ಬಂದು
ನಿನಗೊಂದು ಶಾಂತಿ— ಆ ಜನಕೆ ಜೇರೊಂದು—!

# ರೋದನ

ಹಣ್ಣೆಲೆಯು ಹಾರುತಿರೆ, ನೀರಿನುಗೆಯಾಗುತಿರೆ
ದಿನದ ಬಿಸಿಲಿಗೆ ಹೂವು ಬಾಡುತಿರಲು,
ಮೈಗರೆದು ಮಿಡುಕುತಿದೆ ಮೂಕ ಶೋಕವು, ಸೃಷ್ಟಿ
ಕೋಗಿಲೆಯು ಕೊರಳಿನಲಿ ಹಾಡುತಿರಲು.

ಮನದ ಮಗಳಾದ ನುಡಿ ಹುರುಳಿನಲಿ ನರಳುತಿದೆ.
ಹಾಡು ನೆಲೆಗಾಣದಲೆ ನವೆಯುತಿಹುದು.
ಬಾಳಸಿರಿ ಎಂದಿತ್ತ ಉಸಿರು ಮಸೆದಲಗಾಗಿ,
ಮುಗಿಲ ಮೊಗವನೆ ಕವಿದು, ತಿವಿಯುತಿಹುದು.

ಹುಟ್ಟ ಬೆನ್ನಟ್ಟಿ ಬರುತಿಹುದು ಸಾವು,
ಮಾಯದಿಹ ಗಾಯದಲಿ ಮೊಳೆಯೆ ನೋವು.
ತಾಯ ಕರೆಯಲು ಮುಗ್ಧ ಬಾಲಸರಣಿ—
ರೋದನವು ಕೂಗುತಿದೆ 'ಬಾರೊ ಕರುಣಿ'

# ಕಂಬನಿ

ಅಲ್ಲೋಲಕಲ್ಲೋಲವಾದ ಸಾಗರದಲ್ಲು
ನಾನು ಸಾಗರವಿದ್ದು ಸಾಗಬಲ್ಲೆ.
ಹಾಳು ಹಂಪೆಯ ಮಣ್ಣಿನಂಥ ಕಣ್‌ಗಳ ಕಂಡು,
ನನ್ನ ಚೈತನ್ಯವೂ ನಿಂತ ಕಲ್ಲೆ !

ಸಿಡಿಲ ಸೈರಿಸುವೆ, ಕಂಬನಿಯ ಸೈರಿಸಲಾರೆ,
ನಂಜುಂಡ ಶಿವ ನುಂಗದಂಥ ನಂಜು;
ಭವಭವಾಂತರದಲ್ಲಿ ತೊಳಲಾಡಿಸುತ್ತಿರುವ
ಆ ಭವಾನಿಗೆ ಹಿಡಿದ ಹಗಲಪಂಜು !

ಎಲೆ ಜೀವ, ನರಜನ್ಮವೊಂದೆಯಲ್ಲ;
ಹಲವು ಲೋಕಗಳುಂಟು, ಒಂದೆ ಇಲ್ಲ;
ಜೀವ ಪಾಂಥನಿಗಾಗಿ ದೇಹನೌಕೆ;
ಸಾವೆಂಬುದೊಂದಿರಲು, ಅಂಜಲೇಕೆ ?

# ಪ್ರಾಣಿಜೀವನ

ಹರಿಗಡೆದ ಕೆರೆಯು ಕೊಳೆಗೊಂಡು ನಾರುವ ನೀರು
ರಸವ ಹೀರುವ ಕಸದ ತವರು ಮನೆಯು.
ಸಾವ-ಕುದುರೆಯು ದಂಡಿನೊಲು ಬರುವ ಸೊಳ್ಳೆಗಳ
ಮೇವು-ಮೀಸಲಕಾಗಿ ಕಾದ ಬಸವು.

ಮೀಂಬುಲಿಗ ಬೆಳ್ಳಕ್ಕಿ ಬೇಟೆಯಾಡಲು ಅಡವಿ;
ಮೀನಗಳ ಹುಟ್ಟು ಮನೆ; ಸುಡುವ ಕಡೆಯು;
ಮೀನಬಲೆಗಾರರಾಡುಂಬೊಲವು; ಹಕ್ಕಿಗಳ
ಜೀವಕ್ಕೆ ಗುರಿಯಿಡುವರಾಟದೆಡೆಯು.

ಜೀವನವು ವಿಷವಾದ ವಿಷಮಲೀಲೆ,
ಜೀವಕಲಹದ ಪ್ರಥಮ ಪಾಠಶಾಲೆ.
ಜೀವಜೀವಕೆ ಹರಣ, ಜೀವಮರಣ;
ಪ್ರಾಣಿಜೀವನವೊಂದು ಪ್ರಾಣಹರಣ.

# ಬಾಳಿದೆಯ ಶೂಲ

ಹೊಸ್ನುರಿಯ ಮೈ ಒಣ್ಣ, ಕೆಂಡಕಾರುವ ಕಣ್ಣ
ಒಂಟಿದೆಯ ಹುಲಿರಾಯ, ಸಂಟ ಸೀಸು.
"ಕವಡು ಕಂಟಕವಿಲ್ಲದೀ ಹುಲ್ಲೆ ಸವಿ ಮೇವು"
ಎಸುವೆ ಆದು ತಿಂದಂಥ ಗಂಟು ಏಸು ?

ಸೀ ಪಶುವು; ನಿನಗೇನು ? ಮನದ ಚೊಚ್ಚಿಲ ಮಗನು
ನರಪಶುವು ಸರಹಸುಗಳೆಷ್ಟೊ ತಿಂದ.
ತನ್ನ ತಾನೆನಿಸದನು, ಮೂರು ಕಣ್ಗಳ ಮುಚ್ಚಿ,
ಹಣೆಗಣ್ಣ ಶಿವರುದ್ರ ಶರಣು ಎಂದ.

ಜೀವ ಜೀವದ ಉಣಿಸೆ ? ಏಸು ಜೀವನವೊ ?
ಬಾಳಿದೆಗೆ ಶೂಲವಿರಲೇನು ಕಾರಣವೊ ?
ಬೇರೆ ಹಾದಿಯೆ ಇಲ್ಲೆ ? ಇದು ಯಾವ ಭಾವ
ಇದು ಏಸು ದೇವ ? ಓ ದೇವ ಮಾದೇವ ?

# ಎಣಿಕೆ

ನಡುಹಗಲಿನಲಿ ನಮ್ಮನೆಣಿಕೆ ಇಣಕುವದೊಂದು,
"ಇಂದು ಬಂದದ್ದು ಹೋದದ್ದು ಏನು?"
ಒರಿಗ್ಯೆಲಿ ಮೊಳಹಾಕಿ ಬಯಲ ಸುತ್ತಿದೆನಷ್ಟೆ!
"ಹಾರುತ್ತ ಹೊರಟಿರುವೆನೆತ್ತ ನಾನು?"

ನಿದ್ರೆಯಿಂದೆಚ್ಚತ್ತು, ನಡು ಇರುಳಿನಲ್ಲಿದ್ದು,
ಬಿಡಿಸುತಿದೆ 'ಮುಂದೆ ಏನೆಂಬ ಗಂಟು?
ಹಿಂದಿನಂತೆಯೆ ಮುಂದೆ, ಎಂದಿನಂತೆಯೆ ಇಂದೆ'
ಬಯಲನುಡಿಯೊಂದು ಪಡಿನುಡಿವುದುಂಟು!

ಎಚ್ಚತ್ತು ಬೇಸತ್ತು ನಿದ್ರೆಯಲಿ ಹೊಕ್ಕೆ;
ನಿದ್ರೆಯಲಿ ತೊಳಲಾಡಿ ಎಚ್ಚರಕೆ ಸಿಕ್ಕೆ;
ನಿದ್ರೆಯೆಚ್ಚರ ಬಿಟ್ಟು ಬೇರೆ ಬಾಳಿಹುದೆ?
ಇಹುದಾದರದರಲ್ಲಿ ನಾ ಬದುಕ ಬಹುದೇ?

# ಇರವು-ಅರಿವು

ಇರವಿಗೂ ಅರಿದೇನು? ಇರವೆ ಅರಿದರಿದು; ಮೋ-
ಣಿದುವೆ ಅದ್ಭುತರವ್ಯ ಶ್ರೀವಿಭೂತಿ!
ಕಂಡುದನೆ ಕೊನೆಯೆಂದು ಕಣ್ಣು ಬಣ್ಣಿಸುತಿತ್ತು.
ಅರಿವು ಒಡನುಡಿಯಿತ್ತು 'ನೇತಿ ನೇತಿ'.

ಒಂದು ಕಿಡಿಕಣದಲ್ಲು ಮಿಡಿದು ಮಿಳ್ಳಿಸುತಿರುವ
ಇರವಿನಾಲದ ಬೀಜವದಕು ಕಿರಿದು.
ಹಬ್ಬಿರುವ ಹೂಬಳ್ಳಿ ಬ್ರಹ್ಮಾಂಡಮಂಡಲವು
ಅರಿವಿನಂಕೆಯೊಳಿರುವದದಕು ಹಿರಿದು!

ಇರವು ಆಕೃತಿಗೊಳ್ಳುತಿಹುದೆ ಚೆನ್‌ಚೆಲುವು.
ಅರಿವಿನಲ್ಲರಗಿದುದೆ ಅದರ ಬಾಳ್‌ಬಲವು.
ಚೆಲುವು ಬಲಗೊಂಡು ಬಿಡುತಿರುವ ನನೆಗೊನೆಯು–
ಬಳ್ಳಿವಳ್ಳಿಯು ಒಲವೆ–ತಾಯ್ತವರುಮನೆಯು.

## ೧೪೮

ಅಡಿಗಳಿಂದಳೆದಾಡೆ ದಾರಿಯುದ್ದೋ ಉದ್ದ,
ದಾರಿ ತೆರೆದವನಾರೊ ಬಲು ವಿಚಿತ್ರ !
ಹೆಜ್ಜೆಯಲಿ ಹಿಗ್ಗಿರಲು, ಹಾದಿಯುದ್ದಕು ಸೊಗಸು,
ಹೆಜ್ಜೆ ಬರೆದಿತು ಹಾದಿಯೆಂಬ ಚಿತ್ರ.

ನೆಲದಗಲದಲ್ಲಿ ಅಗಲಿಕೆಗೆ ಇಂಬಿರಲಾಗಿ,
ಅಗಲಿಕೆಯ ಕಳೆಯಲಿಹುದೊಂದೆ ಹಾದಿ;
ಪ್ರಿಯನ ಬಳಿಗೊಯ್ಯುತಿಹ ಪ್ರೀತಿ–ದೂತಿಯ ಹಾಗೆ
ಇದನದನು ಕೂಡಿಸುವ ಅರಸುಬೀದಿ.

ಹಾದಿಗಳು ಅಪ್ಪುಗೆಗೆ ತೆರೆದ ತೋಳು;
ಹಾದಿಯಿರದಿರೆ ಬಾಳು ಎರಡು ಹೋಳು.
ಇತ್ತಲಿದು ಅತ್ತಲಿದು, ಇಲ್ಲ ಯುಕ್ತಿ.
ಬಿರಿಗಣ್ಣ ಬಿಡುವದೇ ಪರಮ ಯುಕ್ತಿ !

# ತೊಗಲ ಚೀಲ

ತೊಗಲು ಚೀಲಗಳಲ್ಲಿ ಬದುಕು ನಡೆದಿದೆ. ಹೊಟ್ಟೆ
ಹೊಸೆಯುವದೆ ಬಾಳುವೆಯು; ನಿದ್ದೆ ಹಿಗ್ಗು;
ಮಣ್ಣಿನಲಿ ಅನ್ನವನು ಹುಡುಕುತಿವೆ ಕಣ್ಣುಗಳು;
ಇನ್ನುವೂ ಹೂತಿಲ್ಲ ಮನದ ಮೊಗ್ಗು.

ಬಾನ ತುಂಬಿದೆ ಶಂಖನಾದ, ತಿರುತಿರುಗುತಿದೆ
ಚಕ್ರ, ಬಣ್ಣಗಳಲ್ಲಿ ಬೀರಿ ಪ್ರಭೆಯು.
ಕಣ್ಣೆತ್ತಿ ಕಿವಿದೆರೆದು ಬಾಳಬೇಕೆಂಬುವರ
ಕರೆಯುತಿದೆ ಸಾಹಸಕೆ, ಸಾರಿ ಅಭಯ.

ಆಡಿಸಿರಿ ಚಕ್ರವನು, ನುಡಿಯಿಸಿರಿ ಶಂಖ
ನಕ್ಷತ್ರ ಗುರಿಯಿರಲಿ, ಪುಂಖಾನು ಪುಂಖ-
ಕಣೆಗಳೆಸೆಯಿರಿ, ಸಾರಿ ಸ್ವರ್ಗಕೊಳನುಗ್ಗಿ
ಬರಲಿ ಹೂವಿನ ಹಬ್ಬ, ನಲ್ಲೆದೆಯ ಸುಗ್ಗಿ !

# ಸತ್ಯವೀರ

ತೊಗಲ ನಾಲಗೆ ನಿಜವ ನುಡಿಯಲೆಣಿಸಿದರೆ, ತಾ-
ನಂಗೈಲಿ ಪ್ರಾಣಗಳ ಹಿಡಿಯಬೇಕು.
ಇಲ್ಲದಿರೆ ನೀರಿನೊಲು ತಣ್ಣಗಿದ್ದವನದನು
ಉರಿಯ ನಾಲಗೆಯಿಂದ ನುಡಿಯಬೇಕು.

ಸುಡುಗಾಡಿನಲಿ ಹುಡುಗ ಹೆಣವಾದರೇನು? ಕೈ-
ಹಿಡಿದವಳು ಹೊಲೆಯನಾಳಾದರೇನು ?
ಸಿಲುಬೆಯಲ್ಲೊಡಲು, ವಿಷದಲಿ ನೆರಳು ಚಲಿಸಿದರು,
ಆತ್ಮವಾದರೆ ಸಾಕು ಉದಯಭಾನು.

ವಿಶ್ವ ವಿಶ್ವಾಮಿತ್ರನಾಗಿ ತಾನು
ರಾಹುವೊಲು ಬೆನ್ನಟ್ಟಿ ಬಂದರೇನು ?
ನಿಜದಿ ಬೆರೆತವ ಮರೆತು ಬೇರೆ ನೊಲ್ಲ,
ಚಿತೆಯ ಸತಿಯಂತೆ ಕೈ ಎತ್ತಬಲ್ಲ!

# ವನಸುಮ

ಹೆಸರಿಲ್ಲದಿಲ್ಲಿ ಎಸೆಯುವದು ಹೂವಿನ ಪಸರ.
ಮರ ಮರದ ಮೆರೆದಾಟವಿರಲಿ ಸುತ್ತ;
ಪಶುಗಳಾರ್ಭಟೆ, ಮೃಗದ ಎಡೆಯಾಟ, ಹುಳಹುಪ್ಪ-
ಡಿಯ ಕಾಟ ನಡೆದಿರಲಿ ನೋಡಿದತ್ತ.

ನೋಡುವರು, ನೋಡಿ ನಲಿದಾಡುವರು ಕೊಂಡು ಕೊಸ-
ದಾಡುವರು ಇಲ್ಲದಿರೆ ಏನು ಕೊರತೆ?
ಬೆಟ್ಟದೆದೆಯನು ಬಿರಿದು ಬಾಳಹಿಗ್ಗಿನ ಬುಗ್ಗೆ
ಉಗ್ಗಿ ಬಹದದು; ಅಲ್ಲ—ಮಳಲಿನೊರತೆ.

ಮೂರು ದಿನಗಳ ಸಂತೆ ಮುಗಿಸ ಬಂದವನು
ಹುಟ್ಟುಕಂಪಿನ ಹುಟ್ಟು ಬಲ್ಲನೇನು?
ಗಂಧಬಾಂಧವನು ಸ್ವಚ್ಛಂದಮಾರುತನು
ಈ ಸೌಸವವ ಮೂಸಿ ಉಸಿರಾಡಿಸುವನು.

# ಅಮರ ಜೀವನ

ಮುತ್ತಲದ ನೆತ್ತರವ ಚಿಮ್ಮಿ ಚಿತ್ರಿಸುವ ಹೂ
ಸುಗ್ಗಿಯೊಲುಮೆಯ ತಂದೆ ಅಂಚೆಗಾರ.
ಅರಿತೊಂದು ಕುಡಿನೋಟ, ತಿಳಿದೊಂದು ಮುಗುಳುನಗೆ,
ಬರುವ ಬೆಳಕಿನ ಬಸದ ಸಂಚಕಾರ.

ತನ್ನ ಸನ್ನಿಧಿಯಲ್ಲಿ ಜೀವಕೋಟಿಯಲೊಂದು
ಜೀವ ಹೂ ಬಿಡಲು ಈ ಜನ್ಮ ಧನ್ಯ.
ಒಂದರೆಕ್ಷಣದಲ್ಲಿ ಅಮರ ಯೋಗವು ಉಂಟು
ಅಮರ ಜೀವನವಿದಕು ಏನು ಅನ್ಯ?

'ಇದು ನಿರಂತರವಾಗಿ ನಿಲ್ಲಬೇಕು;
ನಿಲ್ಲದಲೆ ಹಿಗ್ಗಲಿದು; ಇದುವೆ ಸಾಕು.
ಇದು ಬದುಕು, ಇದು ಬಾಳು, ಹಿಗ್ಗಿನಾಟ
ಉಳಿದುದದು ಹುಸಿಯುಸಿರ ಕಳೆವ ಕಾಟ.

# ಇಂದು

ಇಂದಿನರಸನಿಗೇಕೆ ನಾಳನಾಳುವ ಚಿಂತೆ?
ಇಂದು ರಸವನು ಸವಿವುದವಗೆ ಸಾಜ.
ಇಂದು ಮುಳುಗದೆ, ನಾಳೆ ಹೊತ್ತು ಮೂಡುವದೇನು?
ಹೊತ್ತು ಮೂಡಲು, ಇಂದುಗಿಲ್ಲ ತೇಜ.

ನಾಳವೊಗವನು ಮುಸುಕದಿರಲಿಂದು. ಆ ನಿನ್ನೆ
ಸತ್ತ ಹೊತ್ತಿನ ನೆರಳು ಇಂದು ಅಲ್ಲ.
ನಾಳಿನ ಭವಿಷ್ಯಕ್ಕೆ ಬಾಯ ಹಾಕುವ ಪ್ರಾಣಿ,
ಇಂದೀಗಳೀ ಹೊತ್ತು ಬಾಳ ಬೆಲ್ಲ.

ಉಸಿರಿನುಯ್ಯಾಲೆಯಲಿ ಜೀಕುತಿದೆ ಜೀವ
ಜೋಕೆಯಲಿ ಜೀವನವ; ಕಂಡಿಲ್ಲ ಸಾವ.
ಹಿಂದುಮುಂದಿನ ಮುತ್ತ ಪವಣಿಸುವ ಇಂದು
ಎಂದೆಂದಿಗೂ ನೆಲೆಯು; ಇರಲಂದಿಗಂದು!

# ಹಾಡ-ಹುರುಳು

ಕವಿ:— ನನ್ನ ಹಾಡುಗಳನ್ನೆ ನೀನು ಕೇಳುತ ಕುಳಿತೆ,
ನಿನ್ನ ಹಾಡನು ನಾನು ಕೇಳಲೆಂದು
ಕುಳಿತೆ, ನನ್ನೀ ಹಿಗ್ಗು ಮರುದನಿಯ ಕೊಡುವಂತೆ
ನಿನ್ನ ಕಣ್ಣಲಿ ಕಂಡೆ ಕುಣಿವುದೊಂದು.

ರಸಿಕ:— ನನ್ನ ಕಂಗಳ ಕುಣಿತಗಳ ತಾಳಲಯದಲ್ಲಿ
ಕಟ್ಟಿರುವೆ ನಿನ್ನ ನವ ಕಾವ್ಯವನ್ನು;
ನುಗ್ಗಿ ಹಿಗ್ಗುತ್ತಲಿರೆ ಬಗ್ಗಿಸದೆ ಕೋಗಿಲೆಯು ?
ನಿನ್ನ ಹಾಡಲ್ಲವದು ನನ್ನದೆನ್ನು !

ಕವಿ:— ಹಿಗ್ಗು ಸುಖ-ದುಃಖಗಳ ನುಲಿದ ತಿಳಲು;
ಯಾವ ಎದೆಯಲ್ಲೇನು ಬಂದೆ ನೆಳಲು !
ನೋಟದಲಿ ಮರೆತಿತ್ತು ಹಾಡ ಹುರುಳು,
ನಿನ್ನ ಕೊಳಲಹುದು ಈ ನನ್ನ ಕೊರಳು.

# ಪರಿವಿಡಿ

# ಜೀವ-ಜೀವವೇ

ಯಾರ ಬರುವ ಕಾಯುತ್ತಿರುವೆ ?
ಯಾರ ದೆಸೆಗೆ ನೋಯುತ್ತಿರುವೆ ?
ಯಾರಿಗಾಗಿ ಸಾಯುತ್ತಿರುವೆ ?
ಜೀವ ಜೀವವೇ !

ದಿಸಬೆಳಗೂ ನಿರುಕಿಸುವೆ,
ದೆಸೆದೆಸೆಗೂ ಗಿರುಕಿಸುವೆ,
ಮೊಗಮೊಗಗಳ ಪರಕಿಸುವೆ,
ಜೀವ ಜೀವವೇ !

ಕುಣಿವುದಾವ ಲಯಕೆ ನೀಸು ?
ತುಡಿವುದಾವ ಜಗಕೆ ತಾಸು ?
ಆಸೆ-ಬಸಿರ ಬಯಕೆ ಏನು ?
ಜೀವ ಜೀವವೇ !

# ನವಿಲು

ಕುಣಿ ಕುಣಿ, ನವಿಲೇ, ಕುಣೀ ಕುಣೀ

ಬಿಸಿಲಿಗೆ ಬೇಯುತ ಬಾಯ್‌ಬಿಡುತಿದೆ ಇಳೆ,
ಕುದಿವುದು ನೋಡವ್ವ, ತೊಟ್ಟಿಡದಿದೆ ಮಳೆ,
ಬತ್ತಿತು ಹಳ್ಳವು, ಅತ್ತಿತು ತೊರೆಹೊಳೆ,
ತಾಪನ ನೀ ಮರೆ, ಕುಣೀ ಕುಣೀ ॥ ೧ ॥

ನಿನಗಿದೆ ಸಾವಿರ ಕಣ್ಣಿನ ಛತ್ರ,
ಮೂಲೋಕಕು ಬೀಸಣಿಕೆ ವಿಚಿತ್ರ,
ಸರಸತಿ ಅರಳಿಸಿದೀ ಶತಪತ್ರ,
ರೋಮಾಂಚನದೊಳು ಕುಣೀ ಕುಣೀ ॥ ೨ ॥

ನೀ ಕುಣಿ, ಜೊತೆಗಾತಿಯನೂ ಕುಣಿಸು;
ನಿನ್ನ ನೋಡಿ ಜಗ ಮರೆವರ ತಣಿಸು.
ಹರುಷ ಬಾಷ್ಪಗಳನೆತ್ತಲು ಹಣಿಸು;
ಕೇಕೆಯ ಹಾಕುತ ಕುಣೀ ಕುಣೀ ॥ ೩ ॥

ನಭಕ್ಕೆ ಏನಿದೆ ನೆಲದಲಿ ಆಸೆ?
ನೆಲಕಿದೆ ಆರದ ಶುಷ್ಕ ಪಿಪಾಸೆ!
ಮೊಳಗಲಿ ನಿನ್ನಾನಂದದ ಭಾಷೆ.
ನೆಲಮುಗಿಲನು ಹೆಣೆದೀತು ಮಳೆ;
ಮುಗಿಲನು ಮುದ್ದಿಡೆ ನೆಲದ ಬೆಳೆ
ಚಿಗಿವದು, ಜಿಗಿವುದು, ನೆಗೆವುದಿಳೆ;
ಚಿಕ್ಕೆ ಇರುಳು ಕುಣಿದಂತೆ ಕುಣೀ
ಕುಣಿ ಕುಣಿ ನವಿಲೇ ಕುಣೀ ಕುಣೀ

# ದೊಡ್ಡವರು

ದೊಡ್ಡವರದೆಲ್ಲವೂ ದೊಡ್ಡದೆಂಬುವ ಮಾತು
ಸುಳ್ಳಲ್ಲ! ಶ್ರವಣ ಬೆಳಗುಳದಲ್ಲಿ ಒಂದು ಸಾ-
ವಿರ ವರುಷ ನಿಂತ ಗೊಮ್ಮಟ! ವಿಜಯನಗರದ-
ಲ್ಲಿರುವ ಸಾಸಿವೆ ಗಣಪ! ವಿಜಯಪುರದೊಳಗೀಗು
ಆಡಿದ್ದನಾಡಾಡಿ ಏಳೇಳು ಸಲ ನಲಿವ
ಗೋಳಗುಮ್ಮಟ! ಚೆನ್ನಕೇಶವನ ಕಣ್ಣೆದಿರು
ಕುಣಿಕುಣಿವ ನಲ್ಲರೂಪಿನ ಕಲ್ಲು! ವಿಜಯ ವಿ-
ಠ್ಠಲನ ಪಾಡುವ ಕಂಬ! ಹಳ್ಳಿವಳ್ಳಿಯ ಶಿಲಾಶಾಸನವು!

ಕನ್ನಡರ ಕೈವಾಡದಿಂದ್ರಜಾಲಕೆ ಕಲ್ಲು
ಕುಸುರಿತು! ಶಿಲಾಧ್ಯಾನದಿಂದ ಧೇನಿಸುವವರ
ಚೇತನಕಚೇತನ ಸಮಾಧಿಯೋ ಕವಿದುದೋ?
ಬರಬರುತ ಕಲ್ಲಾದುದೋ? ಚಕ್ರವರ್ತಿಗಳ
ಸಿಂಹಪೀಠವು, ಜಗದ್ಗುರುಪೀಠ, ಕಲ್ನಾಟಿ-
ಸಿದ ವೀರರಾಡಿದಾಂಡುಬೊಲವು, ಮಾಸತಿಯ
ನಿಸದಿಗೆಯ ಭೂಮಿ, ಪಾಳ್, ಪಡು, ಬರಡು. ಜಾಗೃತಿಯೂ
ಘನ,—ಕೃತಿಯೂ ಘನವು,—ವಿಸ್ಮೃತಿಯೂ ಘನ! ದೊಡ್ಡವರು!

# ಒಳಹೊರಗೆ

ನನ್ನ ಪಾಡ ತೋಡುವಲ್ಲಿ–
ದನಿ ಕುಗ್ಗಿತು, ಬಾತವು ಕಣ್ಣು;
ನಿನ್ನ ನಾಡ ನೋಡುವಲ್ಲಿ–
ಗಮಗಮ ಹೂ, ಸೀ-ಸವಿ ಹಣ್ಣು;
ಕೆಂಡ–ಬೆಂಕಿ ಕಂಡ ಅಲ್ಲಿ–
ಬರಿ ಇದ್ದಿಲು, ಸುಟ್ಟಿಹ ಬೂದಿ;
ಕತ್ತಲಲ್ಲಿ ಕಣ್ತೆರೆದರು–
ಕಿಡಿ ಬೆಳಕಿಗು ಸುತ್ತಲು ಹಾದಿ;
ನೆರೆಹಾವಳಿ ಮೊರೆದಲ್ಲಿ–
ಹಾಳೊಡಲಲಿ ಹಾಸಿದ ಮಳಲು;
ಬಯಲಾಟವು ನೆರೆದಲ್ಲಿ–
ನೆಲೆನೆಲೆ ಏರುವ ಹೊಳಲು.

## ಲಕ್ಷ್ಯ

ಸಗುವಿರಲಿ
ಅಳುತಿರಲಿ
ಎರಡನ್ನು ನಂಬಿ.
ನಗೆ ನಂಜು
ಅಳು ಮಂಜು
ಇದ್ದೀತು ಎಂಜಿ.

ಮಾತಿರಲಿ
ಇರದಿರಲಿ
ಎರಡು ಸಮ ತಾನು.
ಇದು ಮರುಳು
ಅದು ಹುರುಳು
ಇರಲಾರದೇನು ?

ಹೊರಗೊಂದು
ಒಳಗೊಂದು
ಲಕ್ಷಣವು ಸಾಕು.
ಹಾಗೇನು ?
ಹೀಗೇನು ?
ಲಕ್ಷ್ಯವೇ ಬೇಕು.

# ವಿಜ್ಞಾನಸೂರ್ಯ

೧

ಹೊಟ್ಟೆಯೇ ಮೊಟ್ಟಮೊದಲ ಚಿಂತೆಯು
ಹೊಟ್ಟೆಯಲ್ಲಿ ಬಂದವರ ಚಿಂತೆಯು
ಬೆನ್ನು ಬಿದ್ದು ಬಂದವರ ಚಿಂತೆಯು
ಬೆನ್ನು ಹಿಡಿದ ವಿಧಿ ಬಿಡದ ಚಿಂತೆಯು
ಕೈಯ ಹಿಡಿವರಾರೆಂಬ ಚಿಂತೆಯು;
ಹಿರಿಯರಂಜಿಕೆಯ ಹಿರಿದು ಚಿಂತೆಯು
ನೆರೆಯ ಹೊರೆಯವರ ಹೊರದ ಚಿಂತೆಯು
ಬದುಕು ಸಾರ್ಥಕವೆ ಎಂಬ ಚಿಂತೆಯು
ಮೊದಲಿನಿಂದ ತುದಿವರೆಗು ಚಿಂತೆಯು;
ಬಾಳು ಸುಲಿದುಕೊಳುತಿರುವ ಚಿಂತೆಯು,
ಕೀಳುಗಂಟಿಚವ್ರಡಿಗಳ ಸಂತೆಯು.

೨

ಇಷ್ಟು ಜೀವ ಎಷ್ಟೊಂದು ರಿಣಗಳು?
ಇಷ್ಟು ಚಿಂತೆ ಅಷ್ಟಷ್ಟು ಹೆಣಗಳು.
ಎಲ್ಲ ಹೆಣಗಳನು ತಾನೆ ಸುಡುವದು
ಕೊಳ್ಳಿದೆವ್ವ ಮಂತ್ರಾಗ್ನಿ ಕೊಡುವದು.
ಹಾಳು ಸುರಿಯುತಿದೆ ಚೆಲುವು ಇಳೆಯೊಳು
ಬಾಲವಿಧವೆಯರ ಹಸರು ಹಣೆಯೊಲು;
ಚಿಂತೆಯುಳಿಸಿ ಚಿಂತನದಿ ಮುಳುಗಿಸು
ಅಂತು ಇಂತುಳಿಸಿ ಆತ್ಮ ಬೆಳಗಿಸು!
ಸದಯನಾಗಿ ಹೇ ಗುರುವೆ ಆರ್ಯನೇ!
ಉದಯವಾಗು ವಿಜ್ಞಾನ ಸೂರ್ಯನೇ!!

# ಎರಡು ಚಿತ್ರ

ಹುಡುಗ ಹಾಡುತಿತ್ತು, ಮತ್ತೆ ಆಡುತಿತ್ತು,
ನಡುನಡುವೆ ಓಡುತಿತ್ತು;
ಹುಡುಗ ಕೆಲೆಯುತಿತ್ತು, ಹಾಗೆ ಕುಣಿಯುತಿತ್ತು,
ಏನೊ ತೊದಲಾಡುತಿತ್ತು.
ಏನು ತಿಳಿಯುತಿತ್ತೊ! ಏನು ಹೊಳೆಯುತಿತ್ತೊ!
ಕೈಹೊಯ್ದು ನಗುತಲಿತ್ತು;
ಏನು ಸಿಟ್ಟಿಸುತಿತ್ತೊ! ಏನು ದಿಟ್ಟಿಸುತಿತ್ತೊ!
ಹಿಗ್ಗೊಂದು ಹಿಂಗುತಲಿತ್ತು.
ಒಮ್ಮೊಮ್ಮೆ ಬಂದದ್ದೆ 'ಅಪ್ಪ ಅಪ್ಪಾ' ಎಂದು
ತೊಡೆಗಳನ್ನಪ್ಪುತಿತ್ತು;
ಒಮ್ಮೆ ಮುನಿದಂತೆ ದುರುದುರನೆ ನೋಡುತ್ತಿತ್ತು,
ಎಲ್ಲವೂ ಒಪ್ಪುತಿತ್ತು.
ಮತ್ತೆ ಅಳುತಲು ಇತ್ತು, ಹುಚ್ಚುಚ್ಚು ನಗುತಿತ್ತು.
ಯಾಕೇನೊ ಚೀರುತಿತ್ತು;
ಮತ್ತೇನು ಮಗುದೇನು? ಏನು ಮಾಡಿದ್ದೆಲ್ಲ
ಚೆಂದವೇ ತೋರುತಿತ್ತು.

* * * *

ಹಿರಿಯನಡ್ಡಾಡುತಿಹ, ಮನದೆಡೆಯಲಾಡುತಿಹ,
ಎದೆ ಹೊಕ್ಕು ನೋಡುತಿಹನು;
ಹಿರಿಯ ತೀರದ ದುಃಖವನ್ನು ತಾ ತಿರುತಿರುಗಿ
ಮನದೊಳಗೆ ತೋಡುತಿಹನು.

ತುದಿಸಿಗದ ತೊಡಕನ್ನು ಬಿಡಿಸಲೆಳಸುವನೊಮ್ಮೆ
ಬಿಡಿಸದೆಯೆ ಬಿಡುತಲಿಹನು;
ಎದೆಯ ಬೀದಿಯ ಬಳಸಿ, ಮನದ ಮಾರ್ಗವ ತುಳಿದು,
ಹಳೆ ಹಾದಿ ಹಿಡಿಯುತಿಹನು.
ಮುಳ್ಳುಹಾಸಿಗೆ ಮಂಚ, ಹೊದೆಯೆ ಚಿಂತೆಯ ಕಂತೆ,
ಮೇಲೆ ಮಳೆಗರೆವ ಮುಗಿಲು;
ದಳ್ಳುರಿಯನಿಟ್ಟುಸಿರು ಬೀಸುವದು ಒಳಗೆಲ್ಲ,
ಉಸಿರಿಲ್ಲ ಒಮ್ಮೆ ನಗಲು.

*   *   *   *

ಕರ್ಮಲೇಪವು ಇಲ್ಲ, ಬಗೆಯ ತಾಪವು ಇಲ್ಲ,
ಅಂದು ಒಂದು ನೀರ ಹೂವು;
ಮರ್ಮಭಿನ್ನರು ಮತ್ತೆ ಹೃದಯಭಿನ್ನರು ನಾವು
ಬುಡದೊಳಿಹ ಕೆಸರತಾವು.
ಅಗಿ ಹುಣ್ಣಿಮೆಯ ಹಗಲು, ಗೌರಿಹುಣ್ಣಿಮೆ ಇರುಳು,
ಹೀಗಿಹುದು ಅದರ ದಿನವು;
ಚಿಗರಿಯಂದದಲಿಹುದು ದಿಂಕಿಡುವ ಅದರ ಮನ
ಕಿರಿಗರಿಯ ಹಾಗೆ ತನುವು.
ಇಲ್ಲ ದುಃಖದ ಮಳೆಯು, ಇಲ್ಲ ಭೀತಿಯ ಚಳಿಯು
ಚಿಂತೆ ಸಂತಾಪವಿಲ್ಲ;
ಎಲ್ಲ ಸೊಗಸಿನ ಬೆಳೆಯು, ಎಲ್ಲ ಸೊಬಗಿನ ಕಳೆಯು,
ನಲಿವೊಲವು ಚೆಲುವು ಎಲ್ಲ.

# ಬೇರೊಬ್ಬರ ಮಕ್ಕಳಿಗಾಗಿ

ಮೋರೆ ಮರೆಯಾಯ್ತಿನ್ನು ಮೇಲೆ, ಕಣ್ಣುಗಳೆಂತು
ಯಾರಿಗೂ ಮೋಹನನ ಮಾಡಲಾಪವು! ಕಂದ
ಕಾರಿಬಾರಿಗಳಂತೆ ಸೂರಿಮಾಡಿದ ಸುಖವು
ಎಲ್ಲಡಗಿತೀಗ ಎಲ್ಲ ?
ನಾರಾಯಣಾ! ಅಹಹ! ಎಂಥ ಕೋಮಲ ಜೀವ!
ವಾರಿಜದವೋಲ್ ಮಂಜಿಸಿಂದ ಮರಣವು ಬಂತೆ!
ಪಾರಿಜಾತದ ಹೂವಿನಂತೆ ಮುಟ್ಟಿದ ಒಡನೆ
ಬಾಡಿ ಅಸು ಬಿಟ್ಟಿತಲ್ಲೆ !

ಸೀಟುಗಾರರನೆಲ್ಲ ನಾಡೆ ನಾಚಿಸುವಂಥ
ಮಾಟಮಾಡುವ ಕಣ್ಣು, ಮಾಟವಾಗಿಹ ಮೊಗವು
ಚಾಟು ವಚನಗಳಿಂದ ಬೇಟ ಮನವನು ಮರುಳು-
ಮಾಡಿ ಗಡ ಒಡನೆ ಕೂಡಿ
ಓಟದಿಂ ನೋಟದಿಂ ಚಾಪಲ್ಯವಂ ತೋರಿ
ತಾಟಿಸಿಂದಾಟದಿಂ ಜಿಂಕೆಗೂ ಮಿಾಟಾಗಿ
ನಾಟಕದವೋಲ್ ತಾನಿನೊಳು ತೀರಿಹೋದೆಯಾ?
ಹಾಯ್ ಹಾಯ್ ಸಾವ ಸೊಗಸೆ!

ಇಂಥ ಮರಣದ ಹಾಡು, ಮೇಲೆ ಕೇಳ್ವುದು ನಾರಿ-
ಯಂಥ ಕರುಣೆಯ ಹೃದಯ, ಇನ್ನು ಅದಕೂ ಹೆಚ್ಚು
ಕಂಠಿಯೊಳಗಿನ ಹವಳದಂತಿರುವ ಕರುಳೆರಡು
ಕಳಕೊಂಡ ತಾಯಿ ಕೇಳೆ
ಅಂತರಂಗಕೆ ಬೆಂಕಿಹತ್ತಿ ಹುರಿದಿತು ಚಿತ್ತ
ಕಂಠದೊಳಗಿಂಧೊರಟ ಕಂಬನಿಯು ಕಣ್ಣೆನೊಳು
ಕುಂಠಿತಂ ಆಗೆ, ಕಣ್ ಬಿರಿಬಿರಿಯೆ ಬಿಟ್ಟು, ಸಿಟ್ಟು-
ಸರಿ ಕಿವಿಗೊಟ್ಟಳಾಗ್ಗೆ

# ಲಲಿತಾ

ಮಣ್ಣು ಮುಕ್ಕುವ ಹುಲ್ಲು ಬೀಜದಂತೆಲ್ಲವೂ
ಮಳೆಯೊಡನೆ ಮೊಳೆಯಬಹುದು;
ನೀರ ಹೊಗೆಯನು ಮಾಡಿ, ಮೈ ನೀರ ಹರಿಸುವಾ
ಬಿಸಿಲಿನಲ್ಲೊಣಗಲಹುದು.

ಕಪಿಲೀಲೆಯಂತೆ ಎಲೆ ಕೂಸೆ, ಲಲಿತಾ! ನಿನ್ನ
ಒಂದುವರೆ ತಿಂಗಳಿನ ಕುನ್ನಿ ಬಾಳು;
ತಲೆದೋರಿ ಮೈವೆತ್ತು ಕಣ್ಣುತೆರೆಯದ ಕಾಣ-
ದೊಂದಕ್ಕೆ ಹೆಸರಿಟ್ಟು ಬರೆದ ಹಾಡು.

ಹುಲ್ಲನಿತ್ತಾದರೂ ಸಲುಹಲಾರದಗೇಕೊ
ಮಾಯೆ ಮಮತೆಯು? ಬಿಡಿಸ ಬರದ ಗಂಟು!
ಕಾಯುವದದೆಂತು? ಸರಿ, ಸಾಯುವುದೆ ಮೇಲಾಯ್ತು.
ಕೊಲುವ ಯಮನಿಗು ಕೊಂಚ ಕರುಣೆಯುಂಟು.

# ಸುಖ-ದುಃಖ

ಚುಮು ಚುಮು ನಸುಕಿನಲಿ
ಹೂವುಗಳರಳುವವು
ಅಂದವ ತೋರಿ ಸುಗಂಧವ ಬೀರಿ
ಸಂಜೆಗೆ ತೆರಳುವವು.

ಅದೆ ಹೊಸ ಹರೆಯದಲಿ
ಆಸೆಯು ಮೊಳೆಯುವದು
ಹೂತು ಕಾತು ಹಣ್ಣಾತು ಬೀತು
ಮುಪ್ಪಿನಲಳಿಯುವದು.

ಗಾಳಿಯ ಗತಿಯಲ್ಲಿ
ದುಃಖದ ಸುಳಿವಿಲ್ಲ
ಚಿಕ್ಕಮಕ್ಕಳೂ ನಕ್ಕನಗೆಯಲೂ
ಸುಖಕೂ ಅಳಿವಿಲ್ಲ.

# ಇಂದ್ರ-ಹೂ ಚಂದ್ರ-ಹೂ

ಇಂದರ ಹೂ ಚಂದರ ಹೂ
ಚೆಂದ ಚೆಂದದ ಹೂ
ತಂದು ಇಟ್ಟೇನೀಗ
ನಿನಗಂತ, ಸುಂದರಿ.
ಕಣ್ಣು ಸೋತ್ಯು ಹಾದೀ ನೋಡಿ;
ಮನ ಸೋತ್ಯು ಚಿಂತೀಮಾಡಿ;
ನಾಲ್ಗಿ ಸೋತ್ಯು ಹಾಡಿಹಾಡಿ;
ನಿನ ಹಾಡು, ಸುಂದರಿ.
ಚಿಗರಿ ಸಂಗಾತ ಆಟ
ಎಡಕ ಬಲಕ್ಕ ನೋಟ
ಬಗಬ್ಯಾಡ ಮಾಡುತ ಬ್ಯಾಟಾ
ಬೇಗ ಬಾರ, ಸುಂದರಿ.
ಗಾಳಿ ಸಂಗಾತ ಮಾತು
ಕಳಿಸ ಕೇಳ್ತೇನಿ ಕೂತು
ಮನದಾಗಂತೇನಿ 'ಆತು
ಹುಸಿ ಜನುಮಾ' ಸುಂದರಿ.
ಬಂತು ಸಂಜೆಯು ಹೊತ್ತು
ಬೆಳದಿಂಗಳು ಜೀವದ ಕುತ್ತು
ಮಾಡಬ್ಯಾಡ ಸಾವಿನ ತುತ್ತು
ನನಗಿಂದ, ಸುಂದರಿ.

# ಮಳಿ

ಮಳಿ ಬರುವ ಕಾಲಕ್ಕ
ಒಳಗ್ಯಾಕ ಕೂತೇವೊ
ಇಳಿಯೊಡನೆ ಜಳಕ ಮಾಡೋಣ
ನಾವೂನು, ಮೋಡಗಳ ಆಟ, ನೋಡೋಣ.

ಮರಿಗುಡುಗು ಕೆಲೆವಾಗ
ಮಳೆಗಾಳಿ ಸೆಳೆವಾಗ
ಮರಗಿಡಗಳನ್ನು ಎಳೆವಾಗ
ನಾವ್ಯಾಕ, ಮನೆಯಲ್ಲಿ ಅವಿತು ಕೂತೇವೊ.

ಕೋಲ್ಮಿಂಚು ಇಣಿಕಿಣಿಕಿ
ಕಣ್ಣುಕಿಸಿ ಕೆಣಕೆಣಕಿ
ಬಾ ಗೆಣೆಯ ಹೊರಗೆ ಎನುವಾಗ
ಒಳಸೇರಿ ಹರೆ ಮೀರಿಧ್ವಾಂಗ ಕುಳಿತೇವೊ.

# ತಡಸಲು

ತಡಸಲು ತಡಸಲು ಅಗೊ ಅಲ್ಲಿ,
ದಡದಡ ಎನುವದು ಎದೆ ಇಲ್ಲಿ.
ದಿಡುಗದೊ ಗುಡುಗುಡು ಗುಡುಗುತಿದೆ
ಗಿಡ, ಮರ, ಜನ, ಮನ ನಡುಗುತಿದೆ.
ಗುಡುಗೇ ನೀರಾಗಿಹುದಲ್ಲಿ,
ಮೋಡ ಹುಟ್ಟುತಿದೆ ಮಳೆಯಲ್ಲಿ;
ತುಂತುರ ಮಳೆ ಹೊಳೆಯುಂಚಿಗಿದೆ,
ನೀರೇ ಮಿರಿ ಮಿರಿ ಮಿಂಚುತಿದೆ.
ಮುತ್ತಿನ ಸರಗಳು ಹರಿಯುತಿವೆ
ಗಾಜುಗಂಬಗಳು ಸುರಿಯುತಿವೆ
ಕಾಮನಬಿಲ್ ಮಣಿದಾಡುತಿವೆ
ನೀರಿನ ಹೂ ಕುಣಿದಾಡುತಿವೆ.
ನೆಲಮುಗಿಲ್ಗಳ ನಡುವಿನ ಬೆಡಗು
ರಮ್ಯಭಯಂಕರವೀ ದಿಡುಗು!
ಅದ್ಭುತ ಕರೆವುದು 'ಬಾ ಇಲ್ಲಿ;'
ಭಯ ಗದರಿಸುತಿದೆ 'ನಿಲ್ಲಲ್ಲಿ.'
ಮನ ಧುಮುಕುತ್ತಿದೆ ಹೊಳೆಯಂತೆ
ಸ್ತಂಭಿತ ಮೈ ತಡಸಿಲಿನಂತೆ.
ನಿಂತಲ್ಲಿಯೆ ಕಾಲಂಟಿತ್ತು
ಊಹೆ ದಿಗಂತಕೆ ಹೊಂಟಿತ್ತು.

# ಶ್ರಾವಣದ ಹಗಲು

ನೆಲ ಹಸಿರು; ಹೊಲ ಹಸಿರು; ಗಿಡಗಂಟೆ ಹಸಿರು;
ಫಲ ಏನೊ? ಬಳೆಯುತ್ತಿದೆ ಬಯಲ ಬಸಿರು.
ನೆನೆನೆನೆಸಿ ಅತ್ತಂತೆ ಆಗಾಗ ಮಳೆಯು,
ಅನಿತರೊಳು ನಡು ನಡುವೆ ಹೊಂಬಿಸಿಲ ಕಳೆಯು.

ಗಾಳಿ ಗೋಳಿಡುವಂತೆ ಭೋರಾಡುತಿಹುದು;
ಬಾಳುವೆಯೆ ಹೊಸದೊಂದು ಒಗಟವಾಗಿಹುದು.
ನೆಲೆಯುರಿಯುದೇ, ತೂಗು ಜೋಕಾಲಿಯಾಗಿ
ತಲೆ ತಿರುಗಿಸುವದೊಮ್ಮೆ, ಕೆಳಗೆ ಮೇಲಾಗಿ

ತೂಗಿ ತಲೆದೂಗುವುದು ತಲ್ಲೀನವಾಗಿ
ಬೇಗನೆ ಮತ್ತೆ ಹಾಲ್ಕುಡಿದ ಹಾವಾಗಿ.
ನನ್ನ ಬಾಳುವೆಯುಹುದು ಶ್ರಾವಣದ ಹಗಲು;
ತನ್ನ ಹೊಯ್ದಾಟದಲಿ ಅದಕಿಂತ ಮಿಗಿಲು.

# ಜೀವದ ಗೆಳತಿ

ಬೆರಳು ಬೆರಳುಗಳಲ್ಲಿ, ಕೊರಳು ಕೊರಳಿಸಲಿರಿಸಿ,
ಸುರುಳುರುಳಿ, ಸುತ್ತಿರುವ ಬಳ್ಳಿಗಳ ಹಾಗಾಗಿ,
ಅರಳಿಸುತಲೊಂದೊಂದೆ ಅವಳಿ ಹೂ, ದಿವ್ಯತರ
ದೃಷ್ಟಿಯನು ಪಡೆಯುವಂತೆ,

ಭರದಿ ಮೈಮೇಲೆಲ್ಲ ಕಣ್ಣಾಗೆ, ಆಗ ಮೈ-
ಮರೆತು ನೋಡುತ್ತ ನಿಲ್ಲೋಣ ಸ್ವರ್ಲೋಕವನು,
ಹರಸುತ್ತ ಹುಡುಕಿ ಕಂಡಂತೆ ನಮ್ಮಂತಿರುವ
ನಕ್ಷತ್ರದ್ವಂದ್ವಗಳನು.

ಕೈಗೆ ಕೈ, ಮೈಗೆ ಮೈ, ಬಾಯ್ಗೆ ಬಾಯ್ಗೂಡಿಸೇ!
ಸಾಗಿ, ಬಿಗಿತಾಗಿ, ಒಂದಾಗಿ, ಹನಿಹನಿ ಗೂಡಿ,
ಮಾಗಿ, ಗಡನೊಂದೆರಸವಾಗಿ, ಜೀವೈಕ್ಯದೊಳು
ಸಂಗಮಿತ ಹೊಳೆಗಳಂತೆ

ಆಗಿ, ಹರಿಯೋಣ ಬಾ, ಕೂಗುತೊಂದೇ ಮಾತ,
ನೂಗುತೊಂದೇ ದುಃಖ, ತೂಗುತೊಂದೇ ಸುಖವ,
ಬಾಗು ಬಾಗಿದ ಹಾಗೆ ಮುಗಿಲನೊಡಲೊಳಗಿರಿಸಿ
ಸಾಗೋಣ ಕೂಡಿ ಕೂಡಿ.

# ಪತಿತ

ನಾಯಿಮಕ್ಕಳು ನಾವು—ಅರಸು ಮಕ್ಕಳು ತಾವು!....
ನಾವು ನಿಷ್ಪಾಪರೆಂದೊಂದುಕೊಂಡವರಾರು....?
ಜನ್ಮದಿಂ ಜನ್ಮಕ್ಕೆ ಉಡುಗಿ ಗೂಡಿಸಿ ತಂದ
ತೊಡಕುಗಳ ಮಾಲೆ ನಮ್ಮೆದಿಯಲ್ಲಿ ಜೋಲಾಡು-
ತಿದೆ; ಬೆನ್ನ ಬಿಡದೆ ಬರುತಿದೆ ಕರ್ಮವಿಧಿ ಮಧುವಿ
ನೊಲು; ತಲೆಗೆ ಭಾರವಾಗಿಹುದು ಅಪರಂಪಾರ
ವಾದ ದುಃಖದ ರಾಶಿ,—ಬೆಂಡು ಹೂ ಬಾಸಿಂಗ-
ದಂತೆ ತೋರಿಕೆಯಿಂದ ಮೆರೆದು ಹಣೆಯೊತ್ತುವದು.

ಸ್ವರ್ಗಸೋಪಾನಕ್ಕೆ ಕಾಲಿಡಲು ಬಯಸಿ ಮದ-
ವೆದ್ದು ಬಹ ಗಜಲಕ್ಷ್ಮಿಯೊಡನೆ ಬಹರೆ, ಪರಾಕು!
ಹಾದಿಯಲಿ ಹಳ್ಳವಿದೆ. ಕಳ್ಳಹುದುಲಿನ ದಂಡೆ
ಆಚೆ ಈಚೆಗೆ ಚಾಚಿಕೊಂಡು ಜಪ್ಪಿಸುವಂತೆ
ಸದ್ದಿಲ್ಲದಲೆ ಬಿದ್ದುಕೊಂಡಿಹುದು. ದಾಟಿ ಹೋ-
ಗುವ ಸಂಭ್ರಮದಿ ಉರುಟಿಯಾಗಿ ಹೋಗುವದುಂಟು!
ಪುಣ್ಯವಂತರು ಮಾತ್ರ ಜೋಕೆಯಿರಲಿ!
ಕೆಳಗುಮೇಲಾಗದೊಲು ತೂಕವಿರಲಿ!!

# ಹೊತ್ತು

ಪೂರ್ವಸಾಗರವನ್ನು ಮುಕ್ಕುಳಿಸಿ ಮೇಲ್ಮೆಯಲಿ
ಮೂಡಣದ ಬೆಟ್ಟಗಳ ಮೆಟ್ಟಿ ಎದ್ದೆ.
ಕೈಗೆ ಕೈ ಚಿಗುರಿ, ನೂರ್ನೂರು ಸಾಸಿರವಾಗಿ
ದಿಗ್ದೇಶಗಳನು ಸೆರೆಗೊಳುತಲಿದ್ದೆ.
ಮಧ್ಯಾಹ್ನ ಬಿಸಿಲಿನೊಲು ಭಾಗ್ಯವಿಳಿಯುತಲಿರಲು
ಪಡುವಲದ ಘಟ್ಟಗಳನೇರಿ ಬರುವೆ.
ಕಡಿದುಡಿದು ಬಸಿವ ಕೈಕೆನ್ನೀರ ಕಲೆ ತೊಳೆಯೆ
ಕೊಂಕಣದ ಕಡಲಿನಲಿ ದುಮುಕಲಿರುವೆ.

ಕಾಲಸಿಗು ಕಾಲುಂಟು. ನಿಂತಲ್ಲೆ ನಿಲ್ಲನವ;
ಆವನ ತೇರಿನ ಗಾಲಿ ತಿರುಗಲಹುದು.
ಸುಖವುಂಟು, ದುಃಖವಿದೆ, ಆದನು ತೂಗುತ್ತಿರಲು
ತಕ್ಕಡಿಯು ತೊಲೆಯುು ತಲೆದೂಗಬಹುದು!
ಮೂಡು ಮುಳುಗಿನ ಮುಸುಕಿನಲ್ಲಿಯಂತೆ
ನಟಿಸುತಿಹೆ ನಾಟಕವ ಅಮರರಂತೆ—

# ಗೀತಾಂಜಲಿಯನ್ನೋದಿ

ಗೀತದೊಳಗಿಹ ಬಲವು ಯಾತರೊಳಗೂ ಇಲ್ಲ!
ಭೂತಜಾತಂಗಳಿಗೆ ಈ ಜಗದ ದುಃಖಗಳ
ಆತಂಕಗಳ ಮರೆವುಮಾಡಿ, ಮನದೊಳಗಾನ
ಪಾತಕಿಯು ಪಾಪಗಳ ಹಗಲಿರುಳು ನೆನೆನೆನೆದು
"ತ್ರಾತನಿಲ್ಲವೆ? ಸತ್ತೆ! ಅಯ್ಯೋ!" ಎಂದೊರಲುತಿರೆ,
ಮಾತೆಯಂತವನನ್ನು ಹಾಡಿ ಮಲಗಿಸಿ; ಯಾವ-
ನಾತುರತೆಯಿಂದಖಿಲ ಜನ್ಮವಂ ಕಳೆದು ಸಹ
ಸೋತು–ಸತ್ವವು ಸಿಗದೆ–ಭೀತನಾಗಿರುವಾಗ
ಗೀತವೇ ಜೀವ, ಸದ್ಗೀತವೇ ಜೀವಾಳ, ಗೀತವೇ ಬ್ರಹ್ಮವಹುದು.

# ಪಂಪಾಯಾತ್ರೆ ಮತ್ತು “ವೀ. ಸಿ.”

೧

ಜೀವಕ್ಕೆ ಕಳೆ ಕಡಮೆ ಇರುವದುಂಟು
ಭಾವಕ್ಕು ಹುಸಿಬಣ್ಣ ಬರುವದುಂಟು.
ಜೀವಭಾವಕ್ಕೊಂದು ಸಾಂಗತ್ಯವಿಲ್ಲದಿರೆ
ಅಪಸರದ ಮಾಲೆಯನು ತರುವದುಂಟು.
ಹೀಗಿಹುದ ನೋಡಿಹೆನು—ಎಂದಮೇಲೆ,
“ಹಾಳಿಗೂ ಬಾಳುಂಟೇ?”
ಉಂಟು, ಉಂಟು!

೨

ನಾಲಗೆಗೆ ಸಿಲುಕದಾ ನುಡಿಗಳುಂಟು
ನುಡಿಗಳಿಗು ನಿಲುಕದಾ ಭಾವವುಂಟು.
ಭಾವಗಳ ಬೀಸುಬಲೆಯಲ್ಲಿ ದೊರೆಯದೆ ನುಸುಳಿ
ದಾಟಿರುವ ನೈಜ ಬೇರೊಂದು ಉಂಟು
ಹೀಗೆಂದು ಕೇಳಿದೆನು—ಎಂದ ಮೇಲೆ
“ಮೌನಕ್ಕೆ ಮಾತುಂಟೆ?”
ಉಂಟು, ಉಂಟು!

# " ವಿಜಯವಿದ್ಯಾರಣ್ಯ "

ವಿಜಯ ವಿದ್ಯಾರಣ್ಯ ನೀನೆ ಧನ್ಯ ॥

ಮೈಯೆಲ್ಲ ಕಣ್ಣುಳ್ಳ ಮುಂದಾಳು ಬೇಕು ।
ಕುರುಡುಬಳ್ಳಿಯ ಮೆಳ್ಳ ನಾಯಕರು ಸಾಕು ॥

ಈಸಗುಂಬಳ ಜೊತೆಯು ಬೇಕು, ಈಸುವರೆ, ।
ಪಾತಾಳಕೊಯ್ಯುವಾ ಕಲ್ಲನರಸುವರೇ ? ॥

ಯೋಗಿ, ನಿನ್ನೊಲು ನೀನು ! ದೊರೆಯುನನ್ಯ ।
ವಿಜಯ ವಿದ್ಯಾರಣ್ಯ ನೀನೆ ಧನ್ಯ ॥

ಬೀಜ ಬಿತ್ತುವರುಂಟು; ಬೆಳೆಸಿಕೊಂಡವರು ।
ಉಂಟು ! ಜನರೇನು ಆ ಫಲವನುಂಡವರು ? ॥

ರಾಷ್ಟ್ರ ಪ್ರಪಂಚವನು ಗೈದ ಸಂಸಾರಿ ।
ನಮೊ ನಮೋ ನಿನಗೆಂಬೆ ನೂರುಬಾರಿ ॥

# ಬುದ್ಧಮೂರ್ತಿಯ ಅಮೃತಸ್ಮಿತ

ಉದಯಾಸ್ತಗಳ ಜನ್ಮ ಮರಣ ಚಕ್ರದ ಬಾಧೆ
ಇದಕಿಲ್ಲ; ಕುಂದಮೀರಿದೆ; ಗ್ರಹಣ ಹತ್ತದಿದ-
ಕೆಂದಿಗೂ; ಬೇರೆ ಫಲದಾಸೆಯಿದನೊಣಗಿಸದು;
ಅಜ್ಞಾನ ಮುಗ್ಧ ಮಾಧುರ್ಯ ಮಧುವಲ್ಲ; ಹೊಸ
ಹರೆಯ ಹುಮ್ಮಸದ ಹುಸಿಬಿಸಿಲುಗುದುರೆಯ ಬಾಯ
ಬುರುಗು ಬೆಳಕಲ್ಲ; ಇದು ಹೊಳೆಯ ದಾಟಿದಮೇಲೆ
ಹೊರಳಿ ನೋಡದ ಮಿಂಡ ಪುಂಡ ಬಗೆಯಲ್ಲ; ಮರು-
ಳಿರುಳಿನಲಿ ಮಣ್ಣು ಮುದ್ದಿಡಲು ಬಹ ದಿಗ್ಭ್ರಾಂತ
ನಕ್ಷತ್ರಗಳ ಹುಚ್ಚು ಹೊಳಪಲ್ಲ; ಬುದ್ಧಮೂ-
ರ್ತಿಯ ಅಮರಹಾಸ—ಶ್ರೀ ಬುದ್ಧದೇವನ ದುಃಖ
ಹಿಮಗಿರಿಯ ಶಿಖರದಲಿ ತಪಮಿದ್ದು ಶಾಂತಿ ತ-
ನ್ನನಮ ಧ್ಯಾನದ ಗವಿಯ ಗಹನದಲಿ ಗುರುತಿಸಿದ
ಚೆನ್ನ ಕನಸಿನ ಬಿಂಬ. ಆನಂದ ಕಲ್ಪವೃಕ್ಷಕ್ಕೆ ಬಂ-
ದೊಂದೆ ಹೂ. ಮನೆಮನೆಯ ಪ್ರತಿ ಮನುಜ ಮನಮನದೆ
ಪೂಜಿಸುತ್ತಿಹುದಿದರ ಪೂಜ್ಯ ಪಾರ್ಥಿವ ಪ್ರತಿಮೆ-
ಮೇಗಿಲ್ಲದೀ ನಗೆಯ ಬಣ್ಣ ಮೀರಿದೆ ಮಹಿಮೆ.

# ಪರಿವಿಡಿ

## ಅರ್ಪಣ—ತರ್ಪಣ

# ಅರ್ಪಣ-ತರ್ಪಣ

"ಪುಷ್ಪವಿದ್ದಂತೆ ಮೊಗ್ಗೆಯನರ್ಪಿಸಿಕೊಂಡ ಶಿವನು!
ಪಕ್ವವಾದ ಫಳವಿದ್ದಂತೆ ಕಸುಗಾಯ ಕೊಯ್ದನು ಶಿವನು!
—(ಬಾಲ ಸಂಗಯ್ಯನ ಮರಣಕಾಲಕ್ಕೆ ಬಸವದೇವನ ವಿಲಾಪ)

ಕೊಳಲಾಗಬಹುದಾಗಿತ್ತು, ಕಳಿಲಿದ್ದಾಗಲೇ ಕಡಿದ ಕಾಳ!
ದೇವ! ಮಗುವೆಂದು ತಿಳಿದಿದ್ದೆ ಆದಾಯಿತು ನೀರ್ಗುಳ್ಳೆ!
ಮನೆಯವನೆಂದು ತಿಳಿದಿದ್ದೆ ಅವನಾದ ಅತಿಥಿ!
ಕಣ್ತುಂಬ ಕಾಣಲಿಲ್ಲ; ಬಾಯ್ತುಂಬ ಮುದ್ದಿಡಲಿಲ್ಲ;
ಮನೆಯ ಮಮತೆಯ ಮೂರ್ತಿಯಾದೀತೆಂದಿದ್ದೆ–
ಆದರೆ–ಎಂಜಲು ಮಾಡಿದ್ದಿಲ್ಲ! ಆಯ್ತು–ಮಸಣದ–
ಮಹಾದೇವನ ಮುಡಿಯೊಳಗಿನ ಮೀಸಲ ಮದಗುಣಿಕೆ.

ಹುಳಹುಪ್ಪಡಿಯು ತಿನಸಾಯಿತು ಮೋಹದ ಮುದ್ದೆ!
ಜೀವಗಳೆದ ದೇಹವನ್ನು ಕಣ್ಣೀರ್ಸುರಿಸಿ ಕೊಟ್ಟೆ ಕೃಷ್ಣಾ-
ರ್ಪಣವೆಂದು. ಪಿತನ ಪಾಪದ ಪಿಂಡ ಕಣ್ಮರೆಗಾಯಿತು;
ಮಣ್ಮರೆಯಾಯ್ತು; ಕಂಗೊಳಿಸಲಕಲ್ಪನೆಯ ಪುಣ್ಯಪುಂಜ.
ಮಾತೆಯು ಶಾಪದ ಮೂರ್ತಿ ಬಯಲಾಯಿತು;
ಮುಸುಕಲಿ ಮಮತೆಯ ಧೂಪ ಮನೋರಾಜ್ಯದಲ್ಲಿ.
ನಿಮಿತ್ತಮಾತ್ರ, ಕ್ಷಣಿಕವಾಗಿ ಬಂದ ಕೂಸೇ!
ಸಂಸಾರದ ಸವಿ ಸುಖ ದುಃಖದ ಸರಿಬೆರಿಕೆಯೆಂದು ಕಲಿಸಿದೆ.
ಆದರೆ, ನಿಜವಾಗ ಅಖಂಡ ಪ್ರೀತಿಝರಿಯನ್ನು ಪ್ರವಹಿಸಿದೆ.
ಆದರ ತೀರನಿವಾಸಿಯಾದ ಈ ವಾಣಿ ಹಾಡುವದು,

ಕ್ಷೇಮೇಂದ್ರ!

ನಿನ್ನ ನಾಮಾಂಕಿತ ನಾಮದ ಸನ್ಮಾನಕ್ಕಾಗಿ,
ಅಜ್ಜಿ ಅಮ್ಮಂದಿರ ಸಮಾಧಾನಕ್ಕಾಗಿ,
ನನ್ನ ಮನದ ಸುಮ್ಮಾನಕ್ಕಾಗಿ,
ಈ ಕಾವ್ಯ ತಂದೆ ಕೊಟ್ಟ ಮುದ್ದು.

# ಕಂಡೆ

ನನ್ನ ಬಯಕೆಗಳ ಬಸಿರಲ್ಲಿ ಮೊಳೆದ,
ನನ್ನ ಬಸಿರಿನ ಬಯಕೆಯಲ್ಲಿ ಹೊಳೆದ ಮುದ್ದುಮೊಗವೆ!
ಬಂದೆಯಾ ಇಂದು ಕಂದನಾಗಿ ನನ್ನೊಡಲಲಿ?

ನನ್ನ ಕೂಟದ ಕೋಣೆಯನ್ನು ತೆರೆದು,
ನನ್ನ ನೋಟದ ಬಯಲಿನಲ್ಲಿ ಮೆರೆದು
ನಿಂದೆಯಾ ಮುಂದೆ-ಮುದ್ದಿನ ತಿದ್ದಿದ ಮೂರುತಿಯಾಗಿ?

ಮಾತನ್ನಾಡದ ಮುಗುದಯ್ಯಾ!
ಮಿಕಿಮಿಕಿ ನೋಡುವ ಮರಿಯೆ!
ಪರದೇಶಿಯಾಗಿ ಬಂದೆನ್ನ ಕೂಸೆ!
ಮಾಸದ ಮುಸುಕನ್ನು ಹೊತ್ತು ಬಂದಿದ್ದ ಮೂಸದ ಸೌಸವವೆ?

ಮಣ್ಣಿನ ಮನೆಯನ್ನು ಸೇರಿಬಂದ ಮಾಸದ ಸೊಬಗೆ!
ನನ್ನ ಮನಸಿನ ಹಂದರದಲ್ಲಿದ್ದ ಒಲವಿನ ಮಿಡಿಯೆ!
ನನ್ನ ಕನಸಿನ ಗುಡಿಯಲ್ಲಿದ್ದ ನಲಿವಿನ ಕುಡಿಯೆ!
ನನ್ನ ನನಸಿನ ಬಸಿರಲ್ಲಿದ್ದ ಚೆಲುವಿನ ಕೈಪಿಡಿಯೆ!
ಕೈಗೆ ಬಂದು 'ಕಂಡೆನು' ಎನ್ನಿಸಿದ ಕಂದಯ್ಯಾ!

'ಉಂಡೆನು' ಎನ್ನಿಸುವೆಯಾ-ಬಾಯಿಗೆ ಬಂದು-ಮುದ್ದೆ?

೭೯

# ಹಂಗು

ಹಂಗ ಹಿಂಗಿಸಲು ಬಂದೆಯೊ ?
ಭವವ ಭಂಗಿಸಲು ಬಂದೆಯೊ ?
ಜಗದಿ ಏತಕ್ಕೆ ಬಂದೆನ್ನ ರಂಗನಾಥಾ !

ಮಂಗಲಕೆ ಮಂಗಲವೆ !
ತಂಗಲು ಬಂದೆಯೊ—ನನ್ನ ತೊಡೆಯ ಮೇಲೆ ?
ನನ್ನುಡಿಯ ತೊಟ್ಟಿಲಲ್ಲಿ ಕಾಲಿಟ್ಟ ಕಾರಣವೇನು ?

ನನ್ನ ನನಸಿನ ನನೆಯೇ !
ನನ್ನ ಕನಸಿನ ಕೆನೆಯೆ !
ಹಣ್ಣಾಗುವೆಯಾ—ಬಳಗದ ಬನಗಲ್ಲಿ ?
ಬೆಣ್ಣೆಯಾಗುವೆಯಾ—ಜಗದ ಹುಳಿತಿಳಿಯಲ್ಲಿ ?

ಸಂಸಾರವೆಂಬ ಕಡಲ ಉಕ್ಕಿನ
ತೆರೆಗಳ ತಕ್ಕೆಯಲ್ಲಿ ಕೂಡಿಬಂದ
ಮರದ ತುಂಡುಗಳಂತಿರಬಹುದೇ-
ನೀನು ನನ್ನ ಪಡೆದುದು, ನಾನು ನಿನ್ನ ಹಡೆದುದು ?

## ಆಶೆ–ನಿರಾಶೆ

ಒಗೆಬಗೆಯ ಬಗೆಗಳ ಹಗೆಯಲ್ಲಿ
        ಬಗೆಹರಿಯದಾಗಲು
ನಿನ್ನ ನಗೆಮೊಗದ ಮುಖಾಂತರ
ನಿನ್ನೆದೆಯ ಗೂಡು ಸೇರುವುದು–ನನ್ನ ಆಶೆ.

ಎಂತೆಂತಹ ಚಿಂತೆಗಳ ಸಂತೆಯಲ್ಲಿ
        ಹಾದಿ ದೊರೆಯದಾಗಲು
ನಿನ್ನ ಭವ್ಯ ಮುಖದ ಮುಖಾಂತರ
        ನಿನ್ನ ಭವಿಷ್ಯದ ಮುಗಿಲಲ್ಲಿ ಹಾರುವುದು ನನ್ನ ನಿರಾಶೆ.

ಭವಸಾಗರದ ಸುಳಿಗೆ ಸಿಕ್ಕಿ
        ಬಂಡೆಗೆ ಬಡಿಬಡಿದು ನುಗ್ಗಾಗಿ,
ಬಿರುಗಾಳಿಯಲ್ಲಿ ನಿನ್ನ ಧ್ರುವದೃಷ್ಟಿಯ ನಂಬಿ
        ಸಾಗುವುದು–ನನ್ನ ಆಶೆ.

ತಿರೆಯಂತೆ ತಿರ್ರನೆ ತಿರುತಿರುಗಿ ತಿರುಗಿ ಬರುವುದು
ನಿನ್ನ ಸುತ್ತು–ಮುತ್ತು ಸುತ್ತುವರಿಯಲು
        ಎಳನೇಸರನೆ!–ನನ್ನ ನಿರಾಶೆ.

ನನ್ನ ಹಂಬಲಿನ ಹಂಬಿಗೆ ಹಂದರ ನೀನು;
ನನ್ನ ಬೆಂಬಲದ ನಂಬಿಗೆಯ ಮಂದಿರ ನೀನು;
ನೀನೇ ನನ್ನ ಆಶೆನಿರಾಶೆಗಳ ಗಾಳಿಗೋಪುರ!

# ಆಡು !

ನನ್ನ ಮುದ್ದಾನೆಯೆ ! ನಿನ್ನ ತೋಳ ಸೊಂಡಿಲಾಡಿಸಪ್ಪಾ-
ಮಗುವೆ! ಆಡು–ಆಡು.

ನನ್ನ ಪಾರಿವಾಳವೆ ನಿನ್ನ ಗೋಣನ್ನಾಡಿಸಪ್ಪಾ-
ಮಗುವೆ ! ಆಡು–ಆಡು.

ನನ್ನ ಅರಸಂಚೆಯೆ ! ಅಡಿಯಿಡು, ನಡೆ ನಡೆ.
ಮಗುವೆ ! ಆಡು–ಆಡು

ನನ್ನ ಅರಗಿಳಿಯೆ ! ತುಟಿ ಬಿಚ್ಚು, ನುಡಿ ನುಡಿ.
ಮಗುವೆ ! ಆಡು–ಆಡು.

ನನ್ನ ಬೆಳ್ಳಕ್ಕಿಯೆ ಸಾರು ಸಾರು ಮುಗಿಲಿನ ಕೂಡ
—ಮಗುವೆ ! ಆಡು–ಆಡು.

ನನ್ನ ಬೆಳುವನೆ ! ಹಾರು ಹಾರು ಹಗಲಿನ ಕೂಡ-
ಮಗುವೆ ಆಡು–ಆಡು.

ನನ್ನ ನವಿಲೆ ಕುಣಿ ಕುಣಿ ! ನನ್ನ ನವಿಲೆ ಮಣಿ ಮಣಿ !
ನನ್ನ ಚದುರ ಚಂದ್ರಮಾ ! ಆಡು–ಆಡು.

# ಅವರೇನು ಬಲ್ಲರು?

ಮಕ್ಕಳಿಲ್ಲದಿದ್ದರೆ ಒಂದು ಚಿಂತೆಯಂತೆ,
ಇದ್ದರೆ ನೂರೊಂದು ಚಿಂತೆಯಂತೆ;
ಅನ್ನುವವರೇನು ಬಲ್ಲರು?

ನನ್ನ ಚಿಂತಾಪಹಾರಕ ಚಿಂತಾಮಣಿ!
ಚಿಂತೆಯ ಪಂಚಾಗ್ನಿಯಲ್ಲಿ ತಪಮಾಡಿಸಿ
ತಪಸ್ವಿನಿಯ ಮಾಡಿಸಿದೆ;

ಮಕ್ಕಳೆಂದರೆ ನೊಣದ ಪಾಯಸವೆಂತೆ,
ಕೊರಳಿಗುರುಳೆಂತೆ;
ಅನ್ನುವವರೇನು ಬಲ್ಲರು?

ನನ್ನ ಅಮೃತದ ಝರಿಯೇ!
ನಿನ್ನ ವಿಷವುಂಡು ನೀಲಕಂಠಾಭರಣಳಾದೆ,
ಸುಖದುಃಖ ಸಮನೆಂಬ ಯೋಗಿಯ ಮಾಡಿದೆ.

# ಮೊಲೆ

ನನ್ನ ಬಾಲಗೋಪಾಲನ ಗೋದಲೆಗಳವ್ವಾ ಇವು;
ಕಪಿಲೆಕಾಮಧೇನುಗಳು ಕಟ್ಟಿಹವಿಲ್ಲಿ.
ಅವನಿಗೇನು ಕಡಿಮೆ?

ಗಂಗೆಗೆ ಉಣಿಸುವ ಹಿಮವತಿಯು
ತುಂಗಶಿಖರದ ಮಾದರಿಗಳಿವು.
ಅವನಿಗೇನು ಕಡಿಮೆ?

ವಾತ್ಸಲ್ಯದ ವಿಜಯಯಾತ್ರೆಯಲ್ಲಿ
ನನ್ನ ಕಂದನೂದುವ ಅವಳಿ ಶಂಖಗಳಿವು.
ಅವನಿಗೇನು ಕಡಿಮೆ?

ಎಲ್ಲರ ತಾಯಿಯಾದ ನಲ್ಲಮ್ಮನ ಗುಡಿಯ
ಜೋಡು ಕಳಸಗಳಿವು......
ಅವನಿಗೇನು ಕಡಿಮೆ?

ಹಾಲಿನ ಬಟ್ಟಲುಗಳಲ್ಲ; ಮಾಂಸದ ಬಟ್ಟಲುಗಳಲ್ಲ!
ಜಗದಂಬೆಯು ಜೀವಶಿಶುವನ್ನು ಮಲಗಿಸಿ ತೂಗುವ
ತೊಟ್ಟಿಲ ಕಾಲುಗಳಿವು.
ಅವನಿಗೇನು ಕಡಿಮೆ!

# ಲಲ್ಲೆ

ನನ್ನ ರನ್ನಾ ಚೆನ್ನಾ ! ನನ್ನ ಮಂಗಲಗೌರೀ !
ನೋಡವ್ವಾ–ನೋಡು ನಿನ್ನ ಸೊಬಗಿನ ಕಣ್ಣಿನಿಂದೆ.
ನನ್ನ ತಾಳಿಯ ಮಣಿಯೊಳಗಿನ ತೇಜವಲ್ಲವೆ ನೀನು ?

ನನ್ನ ಪ್ರಾಣದ ಪದಕವೆ ! ನನ್ನ ಮಾಲಕ್ಷ್ಮೀ !
ನೀಡವ್ವಾ–ನೀಡು ನಿನ್ನ ವರದಹಸ್ತದಿಂದೆ.
ನನ್ನ ಜೇಳಿಯ ಮಣಿಯೊಳಗಿನ ಬಂಗಾರವಲ್ಲವೆ ನೀನು ?

ನನ್ನ ಜೀವದ ಜ್ಯೋತಿಯೆ ! ನನ್ನ ಸರಸತೀ !
ಆಡವ್ವಾ ಆಡು–ನಿನ್ನ ಸವಿನಾಲಗೆಯಿಂದೆ,
ನನ್ನ ಕೈಯ ಕಂಕಣಗಳ ಕಣಕಣವಲ್ಲವೆ ನೀನು ?

ನಮ್ಮ ಬನದ ಶಂಕರಿ ! ನಮ್ಮ ಭುವನೇಶ್ವರಿ .
ಗುಡ್ಡದ ಎಲ್ಲಮ್ಮ ! ಬೆಟ್ಟದ ಚಾಮುಂಡಿ !
ನನ್ನ ಬಾಲಮೋಹನ ನಮ್ಮ ನಾಡ ದೇವತೆ!

# ನಗು-ಅಳು

ನನ್ನ ಬೆಲ್ಲದಚ್ಚಿನ ಬೊಂಬೆಯೆ!
ನೀನು ನಕ್ಕರೊಂದು ರುಚಿ, ನೀನು ಅತ್ತರೊಂದು ರುಚಿ.

ನೀನು ನಗುತ್ತಲೆ ನಾನು ನಿನ್ನವಳೆಂದೆನಿಸುವುದು.

ನೀನು ಅಳುತ್ತಲೆ ನೀನು ನನ್ನವನೆಂದೆನಿಸುವುದು.
ನೀನು ನಕ್ಕರೊಂದು ರುಚಿ, ನೀನು ಅತ್ತರೊಂದು ರುಚಿ.

ನಿನ್ನ ಬಾಡಿದ ಮೊಗ ನೋಡಿ
ನನ್ನ ಕಣ್ಣಲ್ಲಿ ನೀರು ನಿಲ್ಲುವುದು.

ನನ್ನ ಅರಳಿದ ಮುಖನೋಡಿ
ನಿನ್ನ ತುಟಿಯಲ್ಲಿ ನಗೆಯೂರುವುದು.
ನೀನು ನಕ್ಕರೊಂದು ರುಚಿ, ನೀನು ಅತ್ತರೊಂದು ರುಚಿ.

ನೀನು ನಕ್ಕರೆ ಬೆಳಕಿನ ಬೆಳೆ
ನೀನು ಅತ್ತರೆ ಮುತ್ತಿನ ಮಳೆ;
ನೀನು ನಕ್ಕರೊಂದು ರುಚಿ, ನೀನು ಅತ್ತರೊಂದು ರುಚಿ.

# ಮುದ್ದು

ಅವ್ವಾ ನೋಡಿರೆ! ಮಲ್ಲಾರಿ ಮಾರ್ತಂಡನ,
ಎಲ್ಲರನು ಗೆಲ್ಲಲು ನಿಂತ ಜಗಜಟ್ಟಿಯು.

ಅವ್ವಾ ನೋಡಿರೆ! ಗುಡ್ಡದ ಕುಮಾರಸ್ವಾಮಿಯು,
ದೇವರ ದಣ್ಣಾಯಕನ,
ಶಾಂತ ಸುಕುಮಾರ ಸುಬ್ಬಯ್ಯನ.

ಅವ್ವಾ ನೋಡಿರೆ! ಕುಳಿತಿರುವ ರತಿಯಿಲ್ಲದ ಕಾಮಣ್ಣನ
ನನ್ನ ತನುಜನಾಗಿ ಬಂದ ಅನಂಗನ.

ಅವ್ವಾ ನೋಡಿರೆ! ಜೋಕುಮಾರನ,
ಬಡವರ ಬೆಂಬಲದವನ,
ಸಡಗರದ ಸೆಟ್ಟಿಯು.

ಅವ್ವಾ ನೋಡಿರೆ! ಸಿಂಗಾರದ ರಂಗನಾಯಕನ.
ಚೆಲುವ ಚೆನ್ನಕೇಶವನ,
ಮಲಗಿದ ಅನಂತಶಯನನ.

ಅವ್ವಾ ನೋಡಿರೆ! ಭೂವೈಕುಂಠನಿವಾಸಿ-
ವೆಂಕಟರಮಣನ,
ತೆರೆಗೈ ತಿರುಕನ.

ಅವ್ವಾ ನೋಡಿರೆ! ಮುದ್ದು ವಿಠ್ಠಲನ,
ದಾಸರ ದಾಸನ, ಟೊಂಕದ ಮೇಲೆ ಕೈಯಿಟ್ಟವನ.

# ರಹಸ್ಯ

ಎಳೆಬಾಳೆಯ ಸುಳಿಯೆಲೆಗಿಂತಲೂ
ತೆಳುವಾದ ನಿನ್ನ ಮೈದೊಗಲ ನೋಡುತ್ತಲೆ
ಕಾಣುವುದು—ನೇಕಾರರ ನಯದ ಕಣ್–ನೆಲೆ.

ಮಳೆಗಾಲದ ಮುಗಿಲುಗಳಿಗಿಂತಲೂ
ಬಣ್ಣದಲ್ಲಿ ಮಿಗಿಲಾದ ನಿನ್ನ ಕಣ್ಣ ನೋಡುತ್ತಲೆ
ಕಾಣುವುದು—ಜಿನುಗಾರರ ಜಿನುಗಿನ ಗೊತ್ತು.

ಉತ್ತಮಾಶ್ವದ ಗತ್ತಿನ ನಡಿಗೆಯ
ಹತ್ತುಗಡೆಯ ಬಲ್ಲ ನಿನ್ನ
ಸ್ವಚ್ಛಂದದುಸುರ ಕೇಳುತ್ತಲೆ
ತಿಳಿಯುವುದು—ಹಾಡುಗಾರರ ತಾಳಗತ್ತಿನ ಮೇಳ.

ಗಾಡಿಗಾರ ತಾವರೆಯ ಎಸಳಿನ
ಮೋಡಿಯ ಮಾಟಕ್ಕಿಂತಲೂ
ನಿನ್ನ ಕೈಕಾಲ್ ಬೆರಳುಗಳ ಮಾಟವ ನೋಡಿ
ಹೊಳೆಯುವುದು—
ಕೈವಾಡದವರ ಕೈಚಳಕದ ಕುಸುರಿನ ಮೇಲುಪಂಕ್ತಿ.

# ದಶಾವತಾರ

ನೆಲದ ಮೇಲೆ ಈಸುವುದು,
ನೋಡಿದಿರಾ ಮೀನಾವತಾರ !
ಮನುಕುಲೋದ್ಧಾರಕ ನನ್ನ ಕುವರ!

ಬಯಲನ್ನೆಲ್ಲ ಬೆನ್ನಲಿ ಹೊತ್ತಿರುವುದು,
ನೋಡಿದಿರಾ ಕೂರ್ಮಾವತಾರ !
ವಂಶಾಧಾರಸ್ತಂಭ ನನ್ನ ಕುವರ !

ಮುಗಿಲನ್ನೆ ಮೊಗದಿಂದೆತ್ತಲು ಹವಣಿಸುವುದು.
ನೋಡಿದಿರಾ ವರಾಹಸ್ವಾಮಿ !
ಹೂಂಕರಿಸುವ ನನ್ನ ಕುವರ !

ತನ್ನ ತಾಯ ಬಸಿರನ್ನೆ ಬಗೆದು ಅವಳ ಕರುಳಮಾಲೆಯನ್ನು
ಧರಿಸುವ ವಿಚಿತ್ರ ನೃಸಿಂಹಸ್ವಾಮಿ !
ನೋಡಿದಿರಾ ಬಾಲ ಪ್ರಲ್ಹಾದ ನನ್ನ ಕುವರ!

ತಾಯಿಯ ಮೇಲೆ ಕೈಯೆತ್ತಲು ಬಂದ
ದಿಟ್ಟ ಪರಶುರಾಮನ ಕಂಡಿರಾ!
ಶಾಪಚಾಪ ಸವ್ಯಸಾಚಿ ನನ್ನ ಕುವರ!

ವೈರಾಗ್ಯಗಳಲ್ಲಿ ರಾಗ ಹುಟ್ಟಿಸುವ!
ಭೋಗಗಳಿಗೆ ತ್ಯಾಗ ಬೋಧಿಸುವ!
ಕಂಡಿರಾ ನವ್ಯೋನವ ಸುಂದರ ನನ್ನ ಕುವರ!

ತಾಯಿತಂದೆಗಳ ಸೆರೆ ಬಿಡಿಸಿ ಗೀತೆಯ ಹಾಡುವ
ಶ್ರೀಕೃಷ್ಣನ ಕಂಡಿರಾ!
ಲೀಲಾವತಾರಿ ನನ್ನ ಕುವರ!

ಕಂಡಿರಾ ದಿಗಂಬರ ಮೂರ್ತಿ! ಬಾಲಬುದ್ಧದೇವ!

ಕೋಲಕುದುರೆಯನೇರುವ ಕಲ್ಕಿ!
ಮ್ಲೇಂಛ ಮೋಹವ ಕೊಂದು ಪ್ರೇಮಧರ್ಮವ
ಪ್ರತಿಷ್ಠಾಪಿಸುವ ನನ್ನ ಕುವರ.

# ಅರ್ಧನಾರಿ-ನಟೇಶ್ವರ

ಕಂದಾ! ನಿನ್ನ ಮುಖದ ಮುದ್ರಾಕೃತಿಯು ನನ್ನಂತಿದೆ;
ಆದರೆ ದೇಹದ ಭದ್ರಾಕೃತಿಯು ಅವರಂತಿದೆ.

ಕಂದಾ! ನಿನ್ನ ಕಣ್ಣೊಳಗಿನ ಕರುಣೆ ನನ್ನಂತಿದೆ;
ಆದರೆ ನೋಟದೊಳಗಿನ ಸರಣಿ ಅವರಂತಿದೆ.

ಕಂದಾ! ನಿನ್ನ ಗದ್ದದ ಮೇಲಣ ಕುಣಿಯು ನನ್ನಂತಿದೆ;
ಆದರೆ ಮೂಗಿನ ಕೆಳಗಣ ಮಣಿಯು ಅವರಂತಿದೆ.

ಕಂದಾ! ನಿನ್ನ ಹುಬ್ಬಿನ ಕೊನೆಯು ನನ್ನಂತಿದೆ;
ಆದರೆ ಮೂಗಿನ ತೆನೆಯು ಅವರಂತಿದೆ.

ಆಹಹ! ಹುಟ್ಟಾ ಗೆಲ್ಲಬಲ್ಲ ಸೋಲದ ಸೊಬಗುಗಾರ!
ಗಂಡುಗಾಡಿಯಲ್ಲಿ ಹೆಣ್ಣಾಮೋಡಿ ಬೆರೆತು
ಅರ್ಧನಾರಿ-ನಟೇಶ್ವರನ ಅಭಿನವಸೃಷ್ಟಿಯಾದೆಯಲ್ಲ!

# ದೃಷ್ಟಿ

ಯಾರ ದೃಷ್ಟಿ ತಾಕಿತು ನನ್ನ ಕಂದಮ್ಮಗೆ—ಯಾರ ದೃಷ್ಟಿ?
ಮುಂಜಾವಿನ ಮಂಜು ತಾಕಿತೋ?
ಮುಚ್ಚಂಜೆಯ ನಂಜು ತಾಕಿತೋ?

ಯಾರ ದೃಷ್ಟಿ ತಾಕಿತು ನನ್ನ ಕಂದಮ್ಮಗೆ—ಯಾರ ದೃಷ್ಟಿ?
ಹೂಗಳು ಕಣ್ಣುಬಿಟ್ಟುವೊ?
ಚಂದ್ರನ ಕಿರಣ ನೆಟ್ಟುವೊ?

ಯಾರ ದೃಷ್ಟಿ ತಾಕಿತು ನನ್ನ ಕಂದಮ್ಮಗೆ—ಯಾರ ದೃಷ್ಟಿ!
ತಾಯಿಯ ದೃಷ್ಟಿ ನಾಯಿಯ ದೃಷ್ಟಿ
ನೀನು ಕುಸುಮ ಸುಕುಮಾರ ಸೃಷ್ಟಿ.

ಎಲ್ಲಿ ಬಚ್ಚಿಡಲಿ—ಎಲ್ಲಿ ಮುಚ್ಚಿಡಲಿ—ನನ್ನ ಕಂದಮ್ಮನ?
ತಾಯಿ ಕಾಡಿದ ಮೇಲೆ ಕಾಯುವರದಾರು?
ಈ ಪಾಪಿದೃಷ್ಟಿ ಮುಚ್ಚಿ ಕಂದನು ಕಣ್ದೆರೆಯಲಮ್ಮ.

# ಅಂಗೈ

ನನ್ನ ಮುಗುಿನ ಮುಚ್ಚಿದ ಮುಟ್ಟಿಗೆಯಲ್ಲಿ
ಮೂಲೋಕದೊಡೆತನವಿರಬಹುದು.
ತೆರೆದು ನೋಡಲೆ....? ಬೇಡ!
ಭಾಗ್ಯ ತೆರೆದ ಮೇಲೆ ಕೈ ತೆರೆವುದೇನು ತಡ?

ನನ್ನ ಮುಗುವಿನ ಮುಚ್ಚಿದ ಮುಟ್ಟಿಗೆಯಲ್ಲಿ
ಧ್ರುವನ ಚಿಕ್ಕೆಯಿರಬಹುದು!
ತೆರೆದು ನೋಡಲೆ....? ಬೇಡ!
ದೈವ ನೆರೆತ ಮೇಲೆ ಕೈ ತೆರೆವುದೇನು ತಡ?

ನನ್ನ ಮುಗುವಿನ ಮುಚ್ಚಿದ ಮುಟ್ಟಿಗೆಯಲ್ಲಿ
ಕುಬೇರನ ಸಂಪತ್ತಿಯಿರಬಹುದು.
ತೆರೆದು ನೋಡಲೆ....? ಬೇಡ!
ಕೊಡುಗೈ—ದೊರೆಯಾದ ಮೇಲೆ ಕೈ ತೆರೆವುದೇನು ತಡ?

ನನ್ನ ಮುಗುವಿನ ಮುಚ್ಚಿದ ಮುಟ್ಟಿಗೆಯಲ್ಲಿ
ನವಶಕ್ತಿಗಳಿರಬಹುದು
ತೆರೆದು ನೋಡಲೆ....? ಬೇಡ!
ಅಂಗೈಯಲ್ಲಿರದಿದ್ದರೂ ಮುಂಗೈಯಲ್ಲಾದರೂ ಇರಬಹುದು.

# ಹುಚ್ಚುಖೋಡಿ

ನಕ್ಕರೆ ನಕ್ಕೇ ನಗುವದು,
ಅತ್ತರೆ ಅತ್ತೇ ಅಳುವುದು—ಒಮ್ಮೊಮ್ಮೆ—

ಆಡಿದರೆ ಆಡಿಯೇ ಆಡುವುದು,
ನೋಡಿದರೆ ನೋಡಿಯೇ ನೋಡುವುದು ಒಮ್ಮೊಮ್ಮೆ—
ಹುಚ್ಚುಖೋಡಿ!

ಮುದ್ದಿಡಹೋದರೆ ಬಿಕ್ಕಿಸಿ ಅಳುವುದು.
ಗುದ್ದಲುಹೋದರೆ ಫಕ್ಕನೆ ನಗುವುದು.
ಹುಚ್ಚುಖೋಡಿ!

ತನ್ನವರು ಕೈಮಾಡಿ ಕರೆದರೂ
ಸುಮ್ಮನಿರುವುದು—ಒಮ್ಮೊಮ್ಮೆ—
ಕಂಡವರು ಕಣ್ಣಿಂದ ಕರೆದರೂ
ಗಮ್ಮನೆ ಹೋಗುವುದು—ಒಮ್ಮೊಮ್ಮೆ
ಹುಚ್ಚುಖೋಡಿ!

ಗಾಳಿ!......ಮನಸುಖರಾಯ!
ಹೊರಳಿದತ್ತ ಹೊರಳಿತು, ತೆರಳಿದತ್ತ ತೆರಳಿತು.
ಹುಚ್ಚುಖೋಡಿ!

# ಬಂತು

ಸುಖದ ಸೆರೆಯಾಗಿ ಬಂತು,
ದುಃಖದ ಮರೆಯಾಗಿ ಬಂತು
ನನ್ನ ಮಗುವಿನ ಮಮತೆ.

ಹಿಗ್ಗಿನ ತೊರೆಯಾಗಿ ಬಂತು,
ನಗೆಯ ತೆರೆಯಾಗಿ ಬಂತು,
ನನ್ನ ಮಗುವಿನ ಮಮತೆ.

ತಳಮಳದ ನೆರೆಯಾಗಿ ಬಂತು,
ಕಳವಳದ ನೊರೆಯಾಗಿ ಬಂತು,
ನನ್ನ ಮಗುಪಿನ ಮಮತೆ.

ಮುಗಿಲಿನ ಸೆರೆಯಾಗಿ ಬಂತು,
ಜಗದ ದೊರೆಯಾಗಿ ಬಂತು,
ನನ್ನ ಮಗುವಿನ ಮಮತೆ.

# ಸ್ವಾಮೀ ನಮ್ಮಪ್ಪಾ!

ಸ್ವಾಮೀ ನಮ್ಮಪ್ಪಾ—ಮಾಡಪ್ಪಾ!
ಮೂಡಣಕೆ ಮೂಡಿದ ಹೊತ್ತಿಗೆ—ಹಗಲಿನ ಬೆಳಕಿಗೆ.

ಸ್ವಾಮೀ ನಮ್ಮಪ್ಪಾ—ಮಾಡಪ್ಪಾ!
ಮುಗಿಲಲ್ಲಿ ನೆರೆದ ಚಿಕ್ಕೆಯ ಜಾತ್ರೆಗೆ—ಇರುಳ ತಳಕಿಗೆ.

ಸ್ವಾಮೀ ನಮ್ಮಪ್ಪಾ—ಮಾಡಪ್ಪಾ!
ಬೆಳತಿಗೆಯ ತಿಂಗಳನಿಗೆ—ಹಾಲಗೋಪಾಲನಿಗೆ.

ಸ್ವಾಮೀ ನಮ್ಮಪ್ಪಾ—ಮಾಡಪ್ಪಾ!
ಮನೆಯ ದೀವಿಗೆಗೆ—ಬಡವರ ಭಾಗ್ಯಕ್ಕೆ.

ಸ್ವಾಮೀ ನಮ್ಮಪ್ಪಾ—ಮಾಡಪ್ಪಾ!
ಒಳಗಿನ ಜೀವರತ್ನಕ್ಕೆ—ಮೂಲೋಕದ ಕುಡಿವೆಳಗಿಗೆ

# ಆಕಾಂಕ್ಷೆ

ರೆಕ್ಕೆಯ ಕುದುರೆಯನೇರಿ,
ಹಕ್ಕಿಯ ಹಾದಿಯ ಹಿಡಿದು,
ದಿಕ್ಕಿನ ತುದಿಗಿದ್ದ ಚಿಕ್ಕೆಗಳ ನಾಡಿನಲ್ಲಿ–

ಮಾತಿನ ಗಿಳಿಯ ಸೂತಿಯ ಮಾಡಿ,
ಪ್ರೀತಿಯ ರಸದ ಗೀತಿಯ ಹಾಡಿ,
ವೇತಾಳರಾಯನಾ ಕೋಟೆಯ ನೋಡಿ–

ರಕ್ಕಸರನ್ನು ಕಾದಿ ಕೊಂದು,
ಬೊಕ್ಕಸವನ್ನು ಸೂರೆಗೊಂಡು,
ಬೆಕ್ಕಸ ಎನೆ ಮೆರೆದು ಬಂದು–

ಮೂಮಲ್ಲಿಗೆಯ ತೂಕದ ಹೆಣ್ಣು
ವಾಲಿಯ ಭಾಂಡಾರದ ಆ ಹೊನ್ನು
ಏಳು ಕಡಲು ಸುತ್ತಿದ ನೆಲವನ್ನು
ಆಳುವನವ್ವಾ ನನ್ನ ಕುಮಾರ!

ನರಲೋಕ ವೀರ! ದೇಶಕೋಶರಕ್ಷಕ ಶೂರ!
ಧರ್ಮದ ಅರಸನಾಗಿ–ದೇವರ ಊಳಿಗದವನಾಗಿ–
ಕಂಟಕರಿಗೆ ಕಾಳನಾಗಿ
ಆಳುವನವ್ವಾ! ಆಳುವನು!!

# ಮುಖರಸ

ಮೋಹಿಸಿಯ ಕೈಯೊಳಗಿನ ಮೋಹಪಾತ್ರ-
ಈ ನನ್ನ ಮಗನ ಮೊಗ
ಅಂಗಾಂಗದೊಳಗಿನ ದೇವದೇವತೆಗಳು
ತಣಿದರು—ಇದರೊಳಗಿನ ರಸವ ಸವಿದು.

ನಕ್ಕು ನಕ್ಕು ನಲಿವಾಗ ಬಿಕ್ಕಿ ಬಿಕ್ಕಿ ಅಳುವಾಗ
ಪುಗುವ ಸೊಲ್ಲು ಒಗುವ ಜೊಲ್ಲು
ವಾತ್ಸಲ್ಯದ ಸೆಲೆಯ ಸೆಲೆದೋರಿತು
ನಿದ್ದೆಯೊಳಗಿಂದ ಎಚ್ಚರಿಸಿತ್ತು-
ಬಂಜೆಗೆ ತೊರೆಗರೆಯಿಸಿತ್ತು—ಈ ಮುಖರಸ.

ಮೊಳೆವಲ್ಲ ಮಿಂಚಿನೊಡನೆ
ಚೀರುತೊದಲ ಗುಡುಗಿನೊಡನೆ
ಸೋನೆಗರೆವ ಹಿಗ್ಗಿನ ಮುಖರಸವು,
ಮೈಯ್ಯಹೊಲದಲ್ಲಿ ರಸಪುಲಕದ ಬೆಳೆ ತಂದಿತು.
ಒಕ್ಕಲಿಗನಾದ ಜೀವರಾಯನಿಗೆ ಅದೆ ಹಬ್ಬ!

# ನಗೆ

ಆಹಾ! ನಿನ್ನ ಹೊಸಲು ಮುರಿಯದ ನಗೆಯೆ
ಸೂಸಲವಾಗಿಹ ನಗೆಯೆ!
ಅಂತರಗಂಗೆಯರಿಯದ ಗಂಗೆ–ನಿನ್ನ ನಗೆ.

ಅದೆ ನಿದ್ದೆಯಿಂದೆಚ್ಚತ್ತಾಗಿನ
ಇನ್ನೂ ಅರಳದಿದ್ದ ನಿನ್ನ ನಗೆಯು
ಎಳನೇಸರಿನ ಹೊಂಬಿಸಿಲ ಕಂದಿಸಿತು.

ನೀನು ಅಳುತಿರುವಾಗಲೆ
ತಲೆದೋರುವ ಮುಗುಳುನಗೆಯು
ಮಳೆಗಾಲ ಸಂಜೆಯ ಹೂಬಿಸಿಲ ಬಾಡಿಸಿತು.

ಮೆಚ್ಚುಮಾಡಿ ಮೈಮರೆಯಿಸುವ
ನಿನ್ನ ಹುಚ್ಚುನಗೆಯು
ಮಾಗಿಯಿರುಳ ಬೆಳುದಿಂಗಳ ಮರೆಯಿಸಿತು.

ನನ್ನ ಕಂಡು ಕುಣಿಕುಣಿದು
ಕೆಲೆಕೆಲೆವ ನಿನ್ನ ಅಟ್ಟಹಾಸವು
ಗಗನಕ್ಕೇರಿ ಗಲ್ಲಿಸಿ ತಾರೆಗಳನ್ನು ತುಳುಕಾಡಿಸಿತು.

ಆಹಾ! ವಾತ್ಸಲ್ಯದ ಮಸ್ತಕಮಣಿಯಾದ ನಗೆಯೆ!
ಹೃತ್ತಮವ ಕರಗಿಸುವ ನಗೆಯೆ!
ಅಸ್ತಮವನರಿಯದ ಬೆಳ್ಳಿ–ನಿನ್ನ ನಗೆ.

# ತಿಲ್ಲಾಣ

ಇದಾವ ಹಾಡು?
ಇದಾವ ತಾಲ?
ಇದಾವ ರಾಗ?
ನನ್ನ ಪುಟ್ಟ ಪುರಂದರ ವಿಠಲಾ!
ಕೈಯ ತಾರತಮ್ಯಕ್ಕೆ ತೊದಲು ನುಡಿಯ ತಿಲ್ಲಾಣ;
ಬಾಯಬೆಲ್ಲವ ಚಪ್ಪರಿಸಿ ಕಾಯಪರವಶನಾದೆ;
ಇದಾವ ರಸ?
ಇದಾವ ಭಾವ?
ಇದಾವ ಹಾವ?
ನನ್ನ ಪುಟ್ಟ ಪುರಂದರ ವಿಠಲಾ!
ಮಾತಿನ ಸೂತಕವಿಲ್ಲದ ನಾದವ ನಾಡುವ ಸೊಲ್ಲು,
ಅರ್ಥದ ಪಾತಕವಿಲ್ಲದ ಜೀವದ ಭಾವದ ಸೊಲ್ಲು,
ಇದಾವ ರೀತಿ?
ಇದಾವ ಗಮಕ?
ಇದಾವ ಯಮಕ?
ನನ್ನ ಪುಟ್ಟ ಪುರಂದರ ವಿಠಲಾ!
ತಿಲ್ಲಾಣದಲ್ಲಿ ಪಲ್ಲವಿಸಿ, ಮುಂದೆ ಪಾಡಿಗೆ ಬರುವ ನಿನ್ನೀ
ಪಾಡು ವಾಚಾಮಗೋಚರವೇ–ಈ ನಿನ್ನ ಧ್ವನಿಕಾವ್ಯ....
ಹಿಂದಿನ ನೆನಸೋ?
ಇಂದಿನ ಮನಸೊ?
ಮುಂದಿನ ಕನಸೊ?
ನನ್ನ ಪುಟ್ಟ ಪುರಂದರ ವಿಠಲಾ!

# ಕಂದಾ

ಅಹಾ ನನ್ನ ಚೆಂದದ ! ಚೆಂದಿರೆಯೆ !
ಕುಂದದ ಕುಡಿಮಲರೆ !
ಅಹಾ ! ನಾನು ಕೈಕೊಂಡ ಜಿದ್ದೇ !
ನನ್ನ ಮೈಗೊಂಡ ಮುದ್ದೆ !

ಅಧರದಲ್ಲಿ ಮುದ್ದಾಗಿ ಉದರದಲ್ಲಿ ಮುತ್ತಾಗಿ
ಇದಿರು ಮೂರ್ತಿಗೊಂಡು ನಿಂತ ಜೀವದ ಹೂವೇ !
ಬ್ರಹ್ಮಾಂಡವನೊಳಗೊಂಡ,
ನಾನು ಹೊತ್ತು ಹೆತ್ತ–ಪಿಂಡವೆ !

ನನ್ನ ಬಸಿರಿನ ತಾವರೆಯಲ್ಲಿ ಬಳೆದ ಬಾಲಬ್ರಹ್ಮಾ !
ಹೆಸರಿನ ಅಪ್ಪಿಗೆಗೆ ಒಪ್ಪದ ಆನಂದಕಂದಾ !
ಏನೆಂದು ಕರೆಯಲಿ, ಏನೆಂದು ಕರೆಯದಿರಲಿ ನಿನ್ನ ?
ಅನಂತನ ಅನಂತನಾಮದಲ್ಲಿಯಾದರೂ ಇಂಬುಂಟೇ ?

# ಅಲೌಕಿಕ

ನನ್ನ ಪಂಕದಲ್ಲಿ ಹುಟ್ಟಿ ಲೇಪವಿಲ್ಲದಿರುವೆ,
ನನ್ನ ಪಂಕಜವೆ!
ನನ್ನ ನೀರಲ್ಲಿ ಬೆಳೆದು ನೀರಾಳದಲ್ಲಿರುವೆ,
ನನ್ನ ನೀರಜವೆ!
ಒಡೆಯಲು ಬಾರದ ಒಡಪಿನಂತಿರುವೆ,
ಬಿಡಿಸಲು ಬಾರದ ತೊಡಕಿನಂತಿರುವೆ,
ನನ್ನ ಮಾನಸದ ಮಡಗನೆ
ಮುಳುಗಿ ನೋಡಿದೆ. ಮುದ್ದಿಸಿ ನೋಡಿದೆ.
ಮೂಸಿ ನೋಡಿದೆ.
ಮುಟ್ಟಿ ನೋಡಿದೆ. ದಿಟ್ಟಿಸಿ ನೋಡಿದೆ.
ನಿನ್ನಳವು ಅಸದಳವು.
ನಿನ್ನ ತಿಳಿಗೊಳದ ತಳವು ಕಾಣದು.
ಗೋಚರಾಗೋಚರವೆ
ಗಾಳಿಯಂತೆ ಹತ್ತಿ ಹತ್ತಿರವಿದ್ದರೂ
ಮುಗಿಲಂತೆ ಮುತ್ತಿ ಸುತ್ತಿರಿದಿದ್ದರೂ
ಕೈ ಕಣ್ಣುಗಳಿಗೆ ಒಯಿಲಾಗಿಹೆ.
ಆದರೆ ಮೃಗಜಲವಾಗಿಯೂ ತಣಿಸುವೆ,
ಸಮೀಪದಲ್ಲಿದ್ದೂ ದಣಿಸುವೆ.
ಯಕ್ಷಾಂಗುಲಿಕೆಯಂತೆ ನಿನ್ನ ತೊಟ್ಟೂ
ನಿನ್ನೆಲ್ಲ ಗುಟ್ಟರಿಯೆ—ನಾನು.
ನವೋನವ ಚಮತ್ಕಾರವೆ ನೀನಾವ ಲೋಕದ ಜೀವ?

# ಕೊನೆಯ ಹೇಳಿಕೆ

—ಬೇಡಿ ಮಾಡುವದೇನು?
ಬಂದಂದು, ಬಾ, ನೀನು
ಹಿಗ್ಗಿ ಸಿಂಗಡಲ ಮನೆಯೋ!

ಬಾಡೇನು! ಎಂದೆಂದು
ಆರದಿರು, ಹಾರದಿರು
ಕಾಡಹೂ ಜೇನ ಹಸಿಯೋ!

ಹೆಣಗಿ ಮಾಡುವದೇನು?
ದೊರೆವಂದು ದೊರೆ ನೀನು
ಕಸಿಯ ಬಿಳಿಹರಳಗಣಿಯೋ!

ಒಣಗೇನು! ಎಂದೆಂದು
ಉರುಳದಿರು, ತೆರಳದಿರು
ಬಡ ಹುಲ್ಲ ಮಂಜು ಮಣಿಯೋ!

# ಕಠಿಣ ಶಬ್ದಗಳ ಅರ್ಥ

ಉಲ್ಲಟಿಸಿ = ಕೆಳಗೆಮೇಲಾಗಿ
ಆಟಮುಟಿಸಿ = ಮುಚ್ಚುಮರೆ ಮಾಡಿ
ಕೊಲ್ಲಟಗಿತ್ತಿ = ಡೊಂಬರವಳು.
ತೇಂಕಾಡು = ತೇಗು
ಕಾಣಿಕೆ = ಕಂಡಿದ್ದು
ಸೋಗೆ = ನವಿಲುಗರಿ
ಸಹ್ಯ = ಸಹ್ಯಾದ್ರಿ
ಸೀರೆ = ಸೀರಾ ನದಿ
ತಾಮ್ರಪರ್ಣಿ = ಮುತ್ತಿಗಾಗಿ ಪ್ರಖ್ಯಾತವಿರುವ ದಕ್ಷಿಣ ಭಾರತದ ಹೊಳೆ
ಕುಂಗ = ಪಕ್ಷಿಮುಕರಾವಳಿಯು ಮೀಸಗಾರ
ಕಣಸು = ದೃಷ್ಟಾಂತ, ಕಾಣ್ಕೆ
ನೊಸಲು = ಹಣೆ
ಸುಸಿಲಾಡು = ಆಲಿಂಗಿಸು
ಪಿಸುಗುಡು = ಮೆಲ್ಲಗೆ ಮಾತ ನಾಡು
ಬಾಸಣಿಸು = ಪರದೆ ಮುಚ್ಚು
ಜವನಿಕೆ = ಪರದೆ, ತೆರೆ
ಒಸಗೆ = ಉತ್ಸವ
ಕೊನರು = ಚಿಗುರು
ಪಸರ = ವಿಸ್ತಾರ

ನಲ್ಲ = ಪ್ರಿಯಕರ
ಗಸಿಗಿಳಿಸು = ಸೋಸು
ಉಡುಗಿ = ಕಡಿಮೆಯಾಗಿ
ಬೆಡಗಿ = ಒಯ್ಯಾರದವಳು
ನೊಲ್ಲು = ಮಾತು
ಹೊಕ್ಕರಣೆ = ಹೊಕ್ಕು ತುಂಬುವ ಹೊಂಡ
ಬಿಮ್ಮಸಿರು = ಬಿಗಿದುಕೊಂಡಿರು
ಬೆಡೆಗೊಳು = ಉತ್ಪತ್ತಿ ಸ್ಥಿತಿಗೆ ಬರು
ಹಸಾದ = ಪ್ರಸಾದ
ವಿಡಾಯ = ಥಂದ
ನೇಹಿಗ = ಪ್ರೀತಿಯುವ
ತುಕ್ಕು = ಜಂಗು
'ಮಾತೆ ಜ್ಯೋತಿರ್ಲಿಂಗ' = ಇದೊಂದು ಅಲ್ಲಮನ ವಚನ
ಕಂಡರಿಸು = ಕಲ್ಲಿನಲ್ಲಿ ಕೆತ್ತು
ರೂವಾರಿ = ಶಿಲ್ಪಿ, ರೂಪು ಕೆತ್ತುವವ
ಲಗ್ಗೆ = ದಾಳಿ
ಹಿಳಿದೆಳೆದು = ಹಿಂಡಿ ತೆಗೆದು
ಮರೀಚಿಕಾ = ಬಿಸಿಲುಗುದುರೆ, ಹುಸಿನೀರು
ಮಲರು = ಹೂವು

ಕಾವಣ = ಎಲೆಯ ಮನೆ
ಕಾದಲ = ಪ್ರಿಯಕರ
ತಳುವದೆ = ತಡಮಾಡದೆ
ನಾಣು = ನಾಚಿಕೆ
ಪಳಗು = ರೂಢಿಯಾಗು
ಗುಲ್ಲು = ಸುಳ್ಳುಬೊಬ್ಬೆ
ಉಗಾಭೋಗ = ವೈಷ್ಣವದಾಸರ ಅನುಭವ ಪದಗಳು
ಸೋಂತು = ವ್ರತಮಾಡಿ
ಹಾವುಗೆ = ಪಾದುಕೆ
ಎದೆಮಾತು = ಅಂತಃಕರಣದ ಮಾತು

ಗಾಳ = ಮೀನಹಿಡಿಯುವ ಮುಳ್ಳು
ಏಗಳು = ಯಾವಾಗಲೂ
ಕಣೆ = ಬಾಣ
ತೊತ್ತುಳಿಗೊಳಿಸು = ತುಳಿದು ತುಳಿದು ಬಿಡು
ಮೀಂಬುಲಿಗ = ಮೀನ ಹಿಡಿಯುವ ಹಕ್ಕಿ
ಆಡುಂಬೊಲ = ಆಟದ ಬಯಲು
ಮಿಳ್ಳಿಸು = ಹೊಯ್ದಾಡು
ಗಿರುಕಿಸು = ಹೊರಳು
ನೇಸರು = ಸೂರ್ಯ
ತಿಂಗಳ = ಚಂದ್ರ

# ಒಪ್ಪೋಲೆ

| ಪುಟ | ಸಾಲು | ತಪ್ಪು | ಒಪ್ಪು |
| --- | --- | --- | --- |
| ೭ | ೧೦ | ನೆಲೆಗೊಳಿಸೆ, | ನೆಲೆಗೊಳಿಸೆ |
| ೧೫ | ೧೪ | –ನ್ನ | ಸನ್ನ |
| ೧೭ | ೫ | ಕುಸಿರಿಸಿ | ಕುಸುರಿಸಿ |
| ೨೪ | ೧೩ | ಮುಸುಕ | ಮುಸುಕು |
| ೩೧ | ೧೦ | ಕಾಲುಂದುಗೆ | ಕಾಲಂದುಗೆ |
| ೪೦ | ೯ | ಹೊಸಿಲಿಕೆ | ಹೊಸ್ತಿಲಕೆ |
| ೪೨ | ೬ | ಗುಡಿಕಟ್ಟಿದಂತಿದೆ | ಗುಡಿಕಟ್ಟಿದಂತೆ |
| ೪೭ | ೧೧ | ಮುಗ್ದ | ಮುಗ್ಧ |
| ೫೩ | ೧೨ | ಯುಕ್ತಿ | ಮುಕ್ತಿ |
| ೫೪ | ೧೦ | ಪುಂಖ– | ಪುಂಖ |
| ,, | ೧೧ | ಕಣೆಗಳೆಸೆಯುರಿ, | ಕಣೆಗಳೆಸೆಯುರಿ. |
| ೫೭ | ೨ | ತಂದೆ | ತಂದ |
| ೬೩ | ೧ | ಬರುವ | ಬರವ |
| ೭೦ | ೧೦ | ಅಂದು | ಅದು |
| ೮೨ | ೬ | ಬಾಳುಂಟೀ | ಬಾಳುಂಟೆ |
| ೧೧೨ | ೬ | ಬಿಡಿಸಿಲು | ಬಿಡಿಸಲು |

೬೮ನೇ ಪುಟದಲ್ಲಿಯು ಅಚ್ಚಾಗದೇ ಉಳಿದ ೫ನೆಯ ಸಾಲು.

ಕೈಯ ಹಿಡಿದು ಬಂದವಳ ಚಿಂತೆಯು.